ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 06-12-2010 |
| ಪ್ರಜಾವಾಣಿ ದಿನ ಪತ್ರಿಕೆ | 07-12-2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರು ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 20-01-2011 ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ (2010-11) ಟೆಂಡರಿಗೆ ಇಡಲಾದ ಮೊತ್ತ | | ರೂ. 58,29,083/- |
|---|---|---|
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಶ್ರೀ ಎ.ಎಸ್. ಪಾಟೀಲ ಪ್ರಥಮ ದರ್ಜೆ ಗುತ್ತಿಗೆದಾರರು | 66,45,163/- | 14.00 ಹೆಚ್ಚು |

ಮೇಲ್ಕಂಡಂತೆ ಶ್ರೀ ಎ.ಎಸ್. ಪಾಟೀಲ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಭಾಗವಹಿಸಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 14.00 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ : 19-2-2011 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಗುತ್ತಿಗೆದಾರರು ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ. 12.00 ರಷ್ಟು ಹೆಚ್ಚಿನ ದರದಲ್ಲಿ ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಅಂಗೀಕರಿಸಬಹುದೆಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3 ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 58,29,083/- ಗಳ ಮೇಲೆ ಶೇ. 6.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 61,78,828/- ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 04 ಅಪಿಬಂ (ತಾಂತ್ರಿಕ) 2011, ಬೆಂಗಳೂರು, ದಿನಾಂಕ : 07ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ನಾರಾಯಣಹಟ್ಟಿ ಗ್ರಾಮದ ಹತ್ತಿರ ಮರಿಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 58,29,083/-ಗಳ ಮೇಲೆ ಶೇ 6.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 61,78,828/- ಗಳಿಗೆ (ರೂ ಅರವತ್ತೊಂದು ಲಕ್ಷ ಎಪ್ಪತ್ತೆಂಟು ಸಾವಿರದ ಎಂಟು ನೂರ ಇಪ್ಪತ್ತೆಂಟು) ಶ್ರೀ ಎ.ಎಸ್. ಪಾಟೀಲ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20.1.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ,**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 754

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆಯ ಸಿಂಧಗಿ ತಾಲ್ಲೂಕಿನ ಚಿಕ್ಕರೂಗಿ ಗ್ರಾಮದ ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಸೇತುವೆಯನ್ನೊಳಗೊಂಡ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್.

**ಓದಲಾಗಿದೆ :** 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ : ಮುಇಂ/ಸನೀ(ಉ)ವಲಯ/ಬಿಜೆಪಿ/ಪಿಬಿ-9/ಚಿಕ್ಕರೂಗಿ ಸೇ.ಸ. ಬ್ಯಾರೇಜ್ /2010-11/684 ದಿನಾಂಕ : 10-02-2011.

2) ಸರ್ಕಾರದ ಆದೇಶ ಸಂಖ್ಯೆ : ಸನೀಇ 10 ನಯೋಕಾ 2010, ದಿನಾಂಕ 27-11-2010.

3) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ : 5-3-2011ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/10-11/454.

**ಪ್ರಸ್ತಾವನೆ :**

ಬಿಜಾಪುರ ಜಿಲ್ಲೆಯ ಸಿಂಧಗಿ ತಾಲ್ಲೂಕಿನ ಚಿಕ್ಕರೂಗಿ ಗ್ರಾಮದ ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಸೇತುವೆಯನ್ನೊಳಗೊಂಡ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ಬಿಜಾಪುರರವರ ನೋಂದಣಿ ಸಿ.ಇ.ಆರ್. ಸಂಖ್ಯೆ : 171/2010-11 ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 06–12–2010 |
| ವಿಜಯ ಕರ್ನಾಟಕ ದಿನಪತ್ರಿಕೆ | 07–12–2010 |
| ಟೈಮ್ಸ್ ಆಫ್ ಇಂಡಿಯಾ ಆಂಗ್ಲ ದಿನಪತ್ರಿಕೆ | 07–12–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರು ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 20–01–2011 ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | |
|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ (2010–11) ಟೆಂಡರಿಗೆ ಇಡಲಾದ ಮೊತ್ತ | | ರೂ. 1,05,29,954/– |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಶ್ರೀ ಎನ್.ವಿ. ಕುಲಕರ್ಣಿ ಪ್ರಥಮ ದರ್ಜೆ ಗುತ್ತಿಗೆದಾರರು | 1,23,21,847/– | 17.02 ಹೆಚ್ಚು |

ಮೇಲ್ಕಂಡಂತೆ ಶ್ರೀ ಎನ್.ವಿ. ಕುಲಕರ್ಣಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 17.02 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ : 19–2–2011 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಗೂ ಮೊದಲು ಗುತ್ತಿಗೆದಾರರು ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ. 12.00 ರಷ್ಟು ಹೆಚ್ಚಿನ ದರದಲ್ಲಿ ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಅಂಗೀಕರಿಸಬಹುದೆಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3 ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,05,29,954/– ಗಳ ಮೇಲೆ ಶೇ. 6.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,11,61,751/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 03 ಅಪಿಬಿಂ (ತಾಂತ್ರಿಕ) 2011, ಬೆಂಗಳೂರು, ದಿನಾಂಕ : 07ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆಯ ಸಿಂಧಗಿ ತಾಲ್ಲೂಕಿನ ಚಿಕ್ಕರೂಗಿ ಗ್ರಾಮದ ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಸೇತುವೆಯನ್ನೊಳಗೊಂಡ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,05,29,954/–ಗಳ ಮೇಲೆ ಶೇ 6.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,11,61,751/– ಗಳಿಗೆ (ರೂ ಒಂದು ಕೋಟಿ ಹನ್ನೊಂದು ಲಕ್ಷ ಅರವತ್ತೊಂದು ಸಾವಿರದ ಏಳು ನೂರ ಐವತ್ತೊಂದು) ಶ್ರೀ ಎನ್.ವಿ. ಕುಲಕರ್ಣಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20.1.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 755 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕು ಹೊಸ ಮದಗ ಕೆರೆಯ ದುರಸ್ಥಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಯ ಟೆಂಡರ್.

**ಓದಲಾಗಿದೆ :** 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ : ಮುಸ(ದ)/ತಾಂ.–2/ಸಇಂ.2/ ಚಿಕ್ಕಮಗಳೂರು/ ಕಡೂರು/ ಮದಗಕೆರೆ/ಇ–ಟೆಂಡರ್/1411/2011/891, ದಿನಾಂಕ : 10–02–2011.

2) ಸರ್ಕಾರದ ಆದೇಶ ಸಂಖ್ಯೆ : ಸನೀಇ 26 ಕೆಜಿದು 2010, ದಿನಾಂಕ 23–10–2010.

3) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ : 5–3–2011ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/10–11/452.

**ಪ್ರಸ್ತಾವನೆ :**

ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕು, ಹೊಸ ಮದಗ ಕೆರೆಯ ದುರಸ್ಥಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಯು ಕೇಂದ್ರ ಸರ್ಕಾರದಿಂದ ಆರ್. ಆರ್. ಮತ್ತು ಆರ್. ಯೋಜನೆಯಡಿಯಲ್ಲಿ ಅನುಮೋದನೆ ನೀಡಲಾಗಿರುವ 375 ಸಣ್ಣ ನೀರಾವರಿ ಇಲಾಖೆಯ

ಕಾಮಗಾರಿಗಳಲ್ಲಿ ಸೇರಿದ್ದು, ಸರ್ಕಾರದ ಆದೇಶ ಸಂಖ್ಯೆ : ಸನೀಇ 26 ಕೆಜಿದು 2010, ದಿನಾಂಕ 23–10–2010 ರಲ್ಲಿ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ಬೆಂಗಳೂರುರವರ ನೋಂದಣಿ ಸಿ.ಇ.ಆರ್. ಸಂಖ್ಯೆ : 118/2010–11 ದಿನಾಂಕ 02–11–2011 ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಚಿಕ್ಕಮಗಳೂರು ಜಿಲ್ಲಾ ಟೆಂಡರ್ ಬುಲೆಟಿನ್ | 06–12–2010 |
| ರಾಜ್ಯ ಟೆಂಡರ್ ಬುಲೆಟಿನ್ | 01–12–2010 |
| ಡೆಕ್ಕನ್ ಹೆರಾಲ್ಡ್ ಹಾಗೂ ವಿಜಯ ಕರ್ನಾಟಕ ದಿನಪತ್ರಿಕೆ | 05–12–2010 |
| ಉದಯವಾಣಿ ದಿನಪತ್ರಿಕೆ | 06–12–2010 |
| ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್ | 04–12–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಮೂರು ಜನ ಗುತ್ತಿಗೆದಾರರು ಮಾತ್ರ ಇ–ಪ್ರೊಕ್ಯೂರ್‌ಮೆಂಟ್ ಮುಖಾಂತರ ಟೆಂಡರ್ ದಾಖಲಾತಿಗಳನ್ನು ಡೌನ್ ಲೋಡ್ ಮಾಡಿಕೊಂಡು ಇ–ಪ್ರೊಕ್ಯೂರ್‌ಮೆಂಟ್ ಮುಖಾಂತರ ದ್ವಿಲಕೋಟೆ ಪದ್ಧತಿಯಲ್ಲಿ ಟೆಂಡರ್‌ಗಳನ್ನು ಸಲ್ಲಿಸಿದ್ದು, ತಾಂತ್ರಿಕ ಬಿಡ್‌ಗಳನ್ನು ದಿನಾಂಕ 03–01–2011 ರಲ್ಲಿ ತೆರೆಯಲಾಗಿದ್ದು ಇಬ್ಬರು ಗುತ್ತಿಗೆದಾರರ ಟೆಂಡರ್ ಅರ್ಹತೆ ಇದ್ದ ಕಾರಣ ಇವರ ಆರ್ಥಿಕ ಬಿಡ್‌ಗಳನ್ನು ದಿನಾಂಕ 02–02–2011 ರಲ್ಲಿ ತೆರೆಯಲಾಗಿದೆ. ಅವರ ಟೆಂಡರ್ ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪರಿಷ್ಕೃತ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ. 8,02,88,023/– |
|---|---|---|
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಹಾಗೂ ಪರಿಷ್ಕೃತ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಶ್ರೀ ಮಾಧವರೆಡ್ಡಿ 1ನೇ ದರ್ಜೆ ಗುತ್ತಿಗೆದಾರರು | 8,66,22,234/– | 7.889 ಹೆಚ್ಚು |
| ಮೆ॥ ಅಮೃತಾ ಕನ್‌ಸ್ಟ್ರಕ್ಷನ್ಸ್ 1ನೇ ದರ್ಜೆ ಗುತ್ತಿಗೆದಾರರು | 8,85,34,347/– | 10.27 ಹೆಚ್ಚು |

ಮೇಲ್ಕಂಡಂತೆ ಶ್ರೀ ಮಾಧವರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಕಡಿಮೆ ದರಗಳನ್ನು ನಮೂದಿಸಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 7.889 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ : 11–2–2011 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರು ಈ ಕಾಮಗಾರಿಯನ್ನು ನಿರ್ವಹಿಸುವಲ್ಲಿ ಉಂಟಾಗುವ ಸಮಸ್ಯೆಗಳು ಕುರಿತು ವಿವರಣೆಯನ್ನು ನೀಡಿದರು. ನಂತರ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 8,02,88,023/– ಗಳ ಮೇಲೆ ಶೇ. 7.00 ರಷ್ಟು ಹೆಚ್ಚಿನ ದರದಲ್ಲಿ ನಿರ್ವಹಿಸುವುದಾಗಿ ಪತ್ರವನ್ನು ನೀಡಿದರು. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಅಂಗೀಕರಿಸಬಹುದೆಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 2 ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 8,02,88,023/– ಗಳ ಮೇಲೆ ಶೇ. 6.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 8,55,06,744/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 04 ಕೆಜಿದು (ತಾಂತ್ರಿಕ) 2011, ಬೆಂಗಳೂರು, ದಿನಾಂಕ : 07ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆರ್.ಆರ್.ಆರ್. ಯೋಜನೆಯಡಿ ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು, ಹೊಸ ಮದಗ ಕೆರೆಯ ದುರಸ್ಥಿ, ಜೀರ್ಣೋದ್ಧಾರ ಮತ್ತು ಪುನರುಜ್ಜೀವನ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 8,02,88,023/–ಗಳ ಮೇಲೆ ಶೇ 6.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 8,55,06,744/– ಗಳಿಗೆ (ರೂ ಎಂಟು ಕೋಟಿ ಐವತ್ತೈದು ಲಕ್ಷ ಆರು ಸಾವಿರದ ಏಳು ನೂರ ನಲವತ್ತ ನಾಲ್ಕು) ಶ್ರೀ ಮಾಧವರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20.1.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 756

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಆರ್.ಆರ್.ಆರ್. ಯೋಜನೆಯಡಿ ಗುಲ್ಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕಿನ ಕೆರೆಗಳ ದುರಸ್ಥಿ, ಜೀರ್ಣೋದ್ಧಾರ ಹಾಗೂ ಪುನರುಜ್ಜೀವನ ಕಾಮಗಾರಿಯ ಟೆಂಡರ್ (ಪ್ಯಾಕೇಜ್ ಸಂಖ್ಯೆ 5 ಮತ್ತು ಇಂಡೆಂಟ್ ನಂ. 1136 ಕುರಿತು).

**ಓದಲಾಗಿದೆ :** 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ : ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ-14/2010-11/299 ದಿನಾಂಕ : 21-01-2011.

2) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ : 5-3-2011ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/10-11/452.

**ಪ್ರಸ್ತಾವನೆ :**

ಆರ್.ಆರ್.ಆರ್. ಕಾರ್ಯಕ್ರಮದಡಿ ಭಾರತ ಸರ್ಕಾರದ ಅನುಮೋದನೆ ದೊರಕಿರುವ 375 ಸಣ್ಣ ನೀರಾವರಿ ಇಲಾಖೆಯ ಕಾಮಗಾರಿಗಳ ಪೈಕಿ ಗುಲ್ಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕಿನ ಕೆಳಕಂಡ 10 ಕಾಮಗಾರಿಗಳು ಸೇರಿದ್ದು ಅವುಗಳಿಗೆ ನೀಡಲಾಗಿರುವ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ವಿವರಗಳು ಕೆಳಕಂಡಂತಿವೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಕೇಂದ್ರ ಸರ್ಕಾರದಿಂದ ಮಂಜೂರಾದ ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿದ ಪ್ರಾಧಿಕಾರ | ಅನುಮೋದಿಸಿದ ಮೊತ್ತ ಹಾಗೂ ತಾಂತ್ರಿಕ ಮಂಜೂರಾತಿಯ ನೋಂದಣಿ ಸಂಖ್ಯೆ |
|---|---|---|---|---|
| 1. | ನಾಡೇಪಲ್ಲಿ ಗ್ರಾಮದ ಹತ್ತಿರ ಪರಮೇಶ್ವರ ಕೆರೆ ಸುಧಾರಣೆ ಕಾಮಗಾರಿ | 20.00 | ಅಧೀಕ್ಷಕ ಇಂಜಿನಿಯರ್ ಸ.ನೀ. ವೃತ್ತ, ಗುಲ್ಬರ್ಗಾ | ರೂ. 20.00 ಲಕ್ಷ ಸಂಖ್ಯೆ : 1897/ ದಿ. 31-05-2010 |
| 2. | ಗೋಪನಪಲ್ಲಿ ಗ್ರಾಮದ ಹತ್ತಿರ ದೇವಿ ಕೆರೆ ಬನ್ನೂರು ಸುಧಾರಣೆ ಕಾಮಗಾರಿ | 22.00 | ಅಧೀಕ್ಷಕ ಇಂಜಿನಿಯರ್ ಸ.ನೀ. ವೃತ್ತ, ಗುಲ್ಬರ್ಗಾ | ರೂ. 22.00 ಲಕ್ಷ ಸಂಖ್ಯೆ : 1895/ ದಿ. 31-05-2010 |
| 3. | ಬಂದೇಪಲ್ಲಿ ಗ್ರಾಮದ ಹತ್ತಿರ ನರಸಪ್ಪಾ ಕೆರೆ ಸುಧಾರಣೆ ಕಾಮಗಾರಿ | 21.00 | ಅಧೀಕ್ಷಕ ಇಂಜಿನಿಯರ್ ಸ.ನೀ. ವೃತ್ತ, ಗುಲ್ಬರ್ಗಾ | ರೂ. 21.00 ಲಕ್ಷ ಸಂಖ್ಯೆ : 1898/ ದಿ. 31-05-2010 |
| 4. | ರಿಬ್ಬನಪಲ್ಲಿ ಗ್ರಾಮದ ಹತ್ತಿರ ಕಾಮರೆಡ್ಡಿ ಕುಂಟಾ ಕೆರೆ ಸುಧಾರಣೆ ಕಾಮಗಾರಿ | 21.00 | ಅಧೀಕ್ಷಕ ಇಂಜಿನಿಯರ್ ಸ.ನೀ. ವೃತ್ತ, ಗುಲ್ಬರ್ಗಾ | ರೂ. 21.00 ಲಕ್ಷ ಸಂಖ್ಯೆ : 1902/ ದಿ. 31-05-2010 |
| 5. | ಕೊಡ್ಲಾ ಗ್ರಾಮದ ಹತ್ತಿರ ಥೂರ ತಲಾಬ ಕೆರೆ ಸುಧಾರಣೆ ಕಾಮಗಾರಿ | 22.00 | ಅಧೀಕ್ಷಕ ಇಂಜಿನಿಯರ್ ಸ.ನೀ. ವೃತ್ತ, ಗುಲ್ಬರ್ಗಾ | ರೂ. 22.00 ಲಕ್ಷ ಸಂಖ್ಯೆ : 1904/ ದಿ. 31-05-2010 |
| 6. | ಜಾಕನಪಲ್ಲಿ ಗ್ರಾಮದ ಹತ್ತಿರ ರಾಯನಚೇರು ಕೆರೆ ಸುಧಾರಣೆ ಕಾಮಗಾರಿ | 22.50 | ಅಧೀಕ್ಷಕ ಇಂಜಿನಿಯರ್ ಸ.ನೀ. ವೃತ್ತ, ಗುಲ್ಬರ್ಗಾ | ರೂ. 22.50 ಲಕ್ಷ ಸಂಖ್ಯೆ : 1844/ ದಿ. 24-05-2010 |
| 7. | ಕೊತ್ತಪಲ್ಲಿ ಗ್ರಾಮದ ಹತ್ತಿರ ದಯಾಚೇರು ಕೆರೆ ಸುಧಾರಣೆ ಕಾಮಗಾರಿ | 21.50 | ಅಧೀಕ್ಷಕ ಇಂಜಿನಿಯರ್ ಸ.ನೀ. ವೃತ್ತ, ಗುಲ್ಬರ್ಗಾ | ರೂ. 21.00 ಲಕ್ಷ ಸಂಖ್ಯೆ : 1903/ ದಿ. 31-05-2010 |
| 8. | ನಾಚವಾರ ಗ್ರಾಮದ ಹತ್ತಿರ ಕುಂಬಿಕೆರೆ ಸುಧಾರಣೆ ಕಾಮಗಾರಿ | 21.00 | ಅಧೀಕ್ಷಕ ಇಂಜಿನಿಯರ್ ಸ.ನೀ. ವೃತ್ತ, ಗುಲ್ಬರ್ಗಾ | ರೂ. 21.00 ಲಕ್ಷ ಸಂಖ್ಯೆ : 1900/ ದಿ. 31-05-2010 |
| 9. | ನಾಚವಾರ ಗ್ರಾಮದ ಹತ್ತಿರ ವಾಣಿ ಕೆರೆ ಸುಧಾರಣೆ ಕಾಮಗಾರಿ | 22.50 | ಅಧೀಕ್ಷಕ ಇಂಜಿನಿಯರ್ ಸ.ನೀ. ವೃತ್ತ, ಗುಲ್ಬರ್ಗಾ | ರೂ. 22.50 ಲಕ್ಷ ಸಂಖ್ಯೆ : 1899/ ದಿ. 31-05-2010 |
| 10. | ದುಗನೂರ ಗ್ರಾಮದ ಹತ್ತಿರ ಊರಕೆರೆ (ತಬಲನ ಕೆರೆ) ಸುಧಾರಣೆ ಕಾಮಗಾರಿ | 20.00 | ಅಧೀಕ್ಷಕ ಇಂಜಿನಿಯರ್ ಸ.ನೀ. ವೃತ್ತ, ಗುಲ್ಬರ್ಗಾ | ರೂ. 20.00 ಲಕ್ಷ ಸಂಖ್ಯೆ : 1901/ ದಿ. 31-05-2010 |
| | ಒಟ್ಟು | **213.50** | | |

ಈ ಕಾಮಗಾರಿಯನ್ನು ಕೈಗೊಳ್ಳಲು ಮೊದಲೆರಡು ಬಾರಿ ಕರೆದ ಟೆಂಡರಿಗೆ ಯಾವುದೇ ಪ್ರತಿಕ್ರಿಯೆ ದೊರಕಿರುವುದಿಲ್ಲ. ನಂತರ ಮೂರನೆ ಬಾರಿಗೆ ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 25–11–2010 |
| ವಿಜಯ ಕರ್ನಾಟಕ ದಿನಪತ್ರಿಕೆ | 19–11–2010 |
| ಪ್ರಜಾವಾಣಿ ದಿನಪತ್ರಿಕೆ | 20–11–2010 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರ್‌ನ ತಾಂತ್ರಿಕ ಬಿಡ್‌ಗಳನ್ನು ತೆರೆದು ಪರಿಶೀಲಿಸಲಾಗಿದ್ದು ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿರುತ್ತಾರೆ. ಅವರ ಆರ್ಥಿಕ ಬಿಡ್ ಅನ್ನು ದಿನಾಂಕ 21–12–2010 ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 1,70,50,995/– |
| ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ (2010–11 ನೇ ಸಾಲಿನ ಹೊಸ ದರಪಟ್ಟಿ) | | | ರೂ. 2,30,46,865/– |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಮೆ॥ ಅಮೃತಾ ಕನ್‌ಸ್ಟ್ರಕ್ಷನ್ಸ್ (ಪಿ. ವೆಂಕಟೇಶ್ವರ ರಾವ್) ಪ್ರಥಮ ದರ್ಜೆ ಗುತ್ತಿಗೆದಾರರು | 2,54,37,695/– | 49.186 ಹೆಚ್ಚು | 10.373 ಹೆಚ್ಚು |

ಮೇಲ್ಕಂಡಂತೆ ಮೆ॥ ಅಮೃತಾ ಕನ್‌ಸ್ಟ್ರಕ್ಷನ್ಸ್, ಪ್ರಥಮ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 10.373 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ : 11–2–2011 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರು ಈ ಕಾಮಗಾರಿಯನ್ನು ನಿರ್ವಹಿಸುವಲ್ಲಿ ಉಂಟಾಗುವ ಸಮಸ್ಯೆಗಳು ಕುರಿತು ವಿವರಣೆಯನ್ನು ನೀಡಿದರು. ನಂತರ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 2,30,46,865/– ಗಳ ಮೇಲೆ ಶೇ. 8.37 ರಷ್ಟು ಹೆಚ್ಚಿನ ದರದಲ್ಲಿ ನಿರ್ವಹಿಸುವುದಾಗಿ ಪತ್ರವನ್ನು ನೀಡಿದರು. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಅಂಗೀಕರಿಸಬಹುದೆಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 2 ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 2,30,46,865/– ಗಳ ಮೇಲೆ ಶೇ. 6.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,44,29,677/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 02 ಕೆಜಿದು (ತಾಂತ್ರಿಕ) 2011, ಬೆಂಗಳೂರು, ದಿನಾಂಕ : 07ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆರ್.ಆರ್.ಆರ್. ಯೋಜನೆಯಡಿ ಗುಲಬರ್ಗಾ ಜಿಲ್ಲೆಯ ಸೇಡಂ ತಾಲ್ಲೂಕಿನ ಕೆರೆಗಳ ದುರಸ್ಥಿ, ಜೀರ್ಣೋದ್ಧಾರ ಹಾಗೂ ಪುನರುಜ್ಜೀವನ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 2,30,46,865/–ಗಳ ಮೇಲೆ ಶೇ 6.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,44,29,677/– ಗಳಿಗೆ (ರೂ ಎರಡು ಕೋಟಿ ನಲವತ್ತನಾಲ್ಕು ಲಕ್ಷ ಇಪ್ಪತ್ತೊಂಬತ್ತು ಸಾವಿರದ ಆರು ನೂರ ಎಪ್ಪತ್ತೇಳು) ಮೆ॥ ಅಮೃತಾ ಕನ್‌ಸ್ಟ್ರಕ್ಷನ್ಸ್, ಪ್ರಥಮ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20.1.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ,**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 757

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ತಾಂಬಾ ತಾಂಡಾದ ಕೂಡಲ ಹತ್ತಿರ ದೊಡ್ಡಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಕುರಿತು

**ಓದಲಾಗಿದೆ :** 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ : ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ-9/ ಕೂಡಲ ತಾಂಬಾ ಬ್ಯಾರೇಜ್/ 2010-11/686 ದಿನಾಂಕ : 10-2-2011.

2) ಸರ್ಕಾರದ ಆದೇಶ ಸಂಖ್ಯೆ : ಸನೀಇ 10 ನಯೋಕಾ 2010, ದಿನಾಂಕ 20-10-2010.

3) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ : 5-3-2011ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/10-11/454.

**ಪ್ರಸ್ತಾವನೆ :**

ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ತಾಂಬಾ ತಾಂಡಾದ ಕೂಡಲ ಹತ್ತಿರ ದೊಡ್ಡಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ಬಿಜಾಪುರರವರ ನೋಂದಣಿ ಸಿ.ಇ.ಆರ್. ಸಂಖ್ಯೆ : 161/2010-11 ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 18-11-2010 |
| ಪ್ರಜಾವಾಣಿ ದಿನಪತ್ರಿಕೆ | 19-11-2010 |
| ಇಂಡಿಯನ್ ಎಕ್ಸ್‌ಪ್ರೆಸ್ ಆಂಗ್ಲ ದಿನಪತ್ರಿಕೆ | 19-11-2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರು ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ಅನ್ನು ದಿನಾಂಕ : 7-1-2011 ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ. 1,84,47,331/- | |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ (2010-11) ಟೆಂಡರಿಗೆ ಇಡಲಾದ ಮೊತ್ತ | | ರೂ. 2,20,82,382/- | |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಎ.ಎಸ್. ಪಾಟೀಲ ಪ್ರಥಮ ದರ್ಜೆ ಗುತ್ತಿಗೆದಾರರು | 2,46,88,499/- | 33.83 ಹೆಚ್ಚು | 11.80 ಹೆಚ್ಚು |

ಮೇಲ್ಕಂಡಂತೆ ಶ್ರೀ ಎ.ಎಸ್. ಪಾಟೀಲ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಭಾಗವಹಿಸಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 11.80 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ : 19-2-2011 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಗುತ್ತಿಗೆದಾರರು ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ. 11.00 ರಷ್ಟು ಹೆಚ್ಚಿನ ದರದಲ್ಲಿ ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಅಂಗೀಕರಿಸಬಹುದೆಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 2,20,82,382/- ಗಳ ಮೇಲೆ ಶೇ. 6.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,34,07,325/- ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 05 ಅಪಿಬಿಂ (ತಾಂತ್ರಿಕ) 2011, ಬೆಂಗಳೂರು, ದಿನಾಂಕ : 07ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ತಾಂಬಾ ತಾಂಡಾದ ಕೂಡಲ ಹತ್ತಿರ ದೊಡ್ಡಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 2.20,82,382/-ಗಳ ಮೇಲೆ ಶೇ 6.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,34,07,325/- ಗಳಿಗೆ (ರೂ ಎರಡು ಕೋಟಿ ಮುವತ್ತ ನಾಲ್ಕು ಲಕ್ಷ ಏಳು ಸಾವಿರದ ಮೂರು ನೂರ ಇಪ್ಪತ್ತೈದು) ಶ್ರೀ ಎ.ಎಸ್. ಪಾಟೀಲ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20-1-2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 758

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ತಾಲ್ಲೂಕು, ಕೋಟೆ ಚಾನಲ್ ಅಭಿವೃದ್ಧಿ ಕಾಮಗಾರಿಯ ಟೆಂಡರ್ ಕುರಿತು

**ಓದಲಾಗಿದೆ :** 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ : ಮುಸ(ದ)/ತಾಂ–2/ಸಇಂ.2/ಚಿಕ್ಕಮಗಳೂರು/ಕೋಟೆ ಚಾಲನ್/ಇ–ಟೆಂಡರ್/ 1365/2010/924 ದಿನಾಂಕ : 11–2–2011.

2) ಸರ್ಕಾರದ ಆದೇಶ ಸಂಖ್ಯೆ : ಸನೀಇ 10 ನಯೋಕಾ 2007, ದಿನಾಂಕ 13–5–2008.

3) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ : 5–3–2011ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/10–11/452.

**ಪ್ರಸ್ತಾವನೆ :**

ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ತಾಲ್ಲೂಕು, ಕೋಟೆ ಚಾನಲ್ ಅಭಿವೃದ್ಧಿ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ಬೆಂಗಳೂರುರವರ ನೋಂದಣಿ ಸಿ.ಇ.ಆರ್. ಸಂಖ್ಯೆ : 445/2008–09 ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮೊದಲೆರಡು ಬಾರಿಗೆ ಕರೆದ ಟೆಂಡರ್ ಪ್ರಕಟಣೆಗೆ ಯಾವ ಗುತ್ತಿಗೆದಾರರು ಸ್ಪಂದಿಸಿರುವುದಿಲ್ಲ. ಮೂರನೆ ಬಾರಿಗೆ ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 1–12–2010 |
| ಡೆಕ್ಕನ್ ಹೆರಾಲ್ಡ್ ಹಾಗೂ ಕನ್ನಡ ಪ್ರಭ ದಿನ ಪತ್ರಿಕೆ | 3–12–2010 |
| ದಿ ಹಿಂದೂ ಹಾಗೂ ಉದಯವಾಣಿ ದಿನ ಪತ್ರಿಕೆ | 4–12–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಕೇವಲ ಒಬ್ಬ ಗುತ್ತಿಗೆದಾರರು ಮಾತ್ರ ಇ–ಪ್ರೊಕ್ಯೂರ್‌ಮೆಂಟ್ ಮುಖಾಂತರ ಟೆಂಡರ್ ದಾಖಲಾತಿಗಳನ್ನು ಡೌನ್ ಲೋಡ್ ಮಾಡಿಕೊಂಡು ದ್ವಿಲಕೋಟೆ ಪದ್ಧತಿಯಲ್ಲಿ ಟೆಂಡರ್‌ಗಳನ್ನು ಸಲ್ಲಿಸಿದ್ದು, ತಾಂತ್ರಿಕ ಬಿಡ್‌ಗಳನ್ನು ದಿನಾಂಕ : 3–1–2011 ರಲ್ಲಿ ತೆರೆಯಲಾಗಿದ್ದು ಸದರಿ ಗುತ್ತಿಗೆದಾರರ ಟೆಂಡರ್ ಅರ್ಹತೆ ಇದ್ದ ಕಾರಣ ಇವರ ಆರ್ಥಿಕ ಬಿಡ್‌ಗಳನ್ನು ದಿನಾಂಕ : 22–1–2011 ರಲ್ಲಿ ತೆರೆದಿರುತ್ತಾರೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ. 1,63,06,862/– | |
| ಪರಿಷ್ಕೃತ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ. 2,11,11,720/– | |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಯು. ಸತೀಶ್ ಶೇಟ್ ಪ್ರಥಮ ದರ್ಜೆ ಗುತ್ತಿಗೆದಾರರು | 2,24,72,677/– | 37.81 ಹೆಚ್ಚು | 6.446 ಹೆಚ್ಚು |

ಮೇಲ್ಕಂಡಂತೆ ಶ್ರೀ ಯು. ಸತೀಶ್ ಶೇಟ್, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 6.446 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ : 11–2–2011 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಗುತ್ತಿಗೆದಾರರು ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ. 6.446 ರಷ್ಟು ಹೆಚ್ಚಿನ ದರದಲ್ಲಿ ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಅಂಗೀಕರಿಸಬಹುದೆಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 2,11,11,720/– ಗಳ ಮೇಲೆ ಶೇ. 6.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,23,78,423/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 05 ಕೆಜಿದು (ತಾಂತ್ರಿಕ) 2011, ಬೆಂಗಳೂರು, ದಿನಾಂಕ : 07ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ತಾಲ್ಲೂಕು, ಕೋಟೆ ಚಾನಲ್ ಅಭಿವೃದ್ಧಿ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 2.11,11,720/–ಗಳ ಮೇಲೆ ಶೇ 6.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,23,78,423/– ಗಳಿಗೆ (ರೂ ಎರಡು ಕೋಟಿ ಇಪ್ಪತ್ತಮೂರು ಲಕ್ಷ ಎಪ್ಪತ್ತೆಂಟು ಸಾವಿರದ ನಾಲ್ಕು ನೂರ ಇಪ್ಪತ್ತ ಮೂರು) ಶ್ರೀ ಯು. ಸತೀಶ್ ಶೇಟ್, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–1–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 759 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ನಾವಲಗಿ ಗ್ರಾಮದ ಹತ್ತಿರ ಜಿನುಗು ಕೆರೆ ನಿರ್ಮಾಣ ಕಾಮಗಾರಿಯ ಟೆಂಡರ್ ಕುರಿತು

**ಓದಲಾಗಿದೆ :** 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ : ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–6/2010–11/852 ದಿನಾಂಕ : 18–2–2011.

2) ಸರ್ಕಾರದ ಆದೇಶ ಸಂಖ್ಯೆ : ಸನೀಇ 02 ನಯೋಕಾ 2009, ಬೆಂಗಳೂರು, ದಿನಾಂಕ 5–2–2009.

3) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ : 5–3–2011ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/10–11/454.

**ಪ್ರಸ್ತಾವನೆ :**

ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ನಾವಲಗಿ ಗ್ರಾಮದ ಹತ್ತಿರ ಜಿನುಗು ಕೆರೆ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 27–11–2010 |
| ಪ್ರಜಾವಾಣಿ ದಿನಪತ್ರಿಕೆ | 26–11–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರು ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ಅನ್ನು ದಿನಾಂಕ : 19–12–2010ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ. 32,91,425/– | |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ (2010–11) ಟೆಂಡರಿಗೆ ಇಡಲಾದ ಮೊತ್ತ | | ರೂ. 40,28,956/– | |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಡಿ.ಎಂ. ತೋಟದ ಪ್ರಥಮ ದರ್ಜೆ ಗುತ್ತಿಗೆದಾರರು | 44,40,285/– | 34.90 ಹೆಚ್ಚು | 10.21 ಹೆಚ್ಚು |

ಮೇಲ್ಕಂಡಂತೆ ಶ್ರೀ ಡಿ.ಎಂ. ತೋಟದ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಭಾಗವಹಿಸಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 10.21 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ : 19–2–2011 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಗುತ್ತಿಗೆದಾರರು ಸಭೆಗೆ ಹಾಜರಾಗಿರುವುದಿಲ್ಲ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಅಂಗೀಕರಿಸಬಹುದೆಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 40,28,956/– ಗಳ ಮೇಲೆ ಶೇ. 5.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 42,50,549/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 01 ಹೊಕೆನಿ (ತಾಂತ್ರಿಕ) 2011, ಬೆಂಗಳೂರು, ದಿನಾಂಕ : 14ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ನಾವಲಗಿ ಗ್ರಾಮದ ಹತ್ತಿರ ಜಿನುಗು ಕೆರೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 40,28,956/–ಗಳ ಮೇಲೆ ಶೇ 5.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 42,50,549/– ಗಳಿಗೆ (ರೂ ನಲವತ್ತೆರಡು ಲಕ್ಷ ಐವತ್ತು ಸಾವಿರದ ಐದು ನೂರ ನಲವತ್ತೊಂಬತ್ತು) ಶ್ರೀ ಡಿ.ಎಂ. ತೋಟದ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ :20–1–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 760

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆಯ ಬಿಜಾಪುರ ತಾಲ್ಲೂಕಿನ ಕಾರಜೋಳ–ದೂಡಿಹಾಳ ಗ್ರಾಮಗಳ ಹತ್ತಿರ ನಾಲಾಕ್ಕೆ ಅಡ್ಡಲಾಗಿ ಸೇತುವೆಯನ್ನೊಳಗೊಂಡ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಕುರಿತು

**ಓದಲಾಗಿದೆ :** 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ : ಮುಇಂ/ಸನೀ(ಉ)ವಲಯ/ಬಿಜೆಪಿ/ಪಿಬಿ–9/ ಕಾರಜೋಳ–ದೂಡಿಹಾಳ ಸೇ.ಸ. ಬ್ಯಾರೇಜ್/2010–11/685 ದಿನಾಂಕ : 10–2–2011.

2) ಸರ್ಕಾರದ ಆದೇಶ ಸಂಖ್ಯೆ : ಸನೀಇ 10 ನಯೋಕಾ 2010, ಬೆಂಗಳೂರು, ದಿನಾಂಕ 27–11–2010.

3) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ : 5–3–2011ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/10–11/454.

**ಪ್ರಸ್ತಾವನೆ :**

ಬಿಜಾಪುರ ಜಿಲ್ಲೆಯ ಬಿಜಾಪುರ ತಾಲ್ಲೂಕಿನ ಕಾರಜೋಳ–ದೂಡಿಹಾಳ ಗ್ರಾಮಗಳ ಹತ್ತಿರ ನಾಲಾಕ್ಕೆ ಅಡ್ಡಲಾಗಿ ಸೇತುವೆಯನ್ನೊಳಗೊಂಡ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ಬಿಜಾಪುರರವರ ನೋಂದಣಿ ಸಿ.ಇ.ಆರ್. ಸಂಖ್ಯೆ : 168/2010–11 ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 6–12–2010 |
| ವಿಜಯ ಕರ್ನಾಟಕ ದಿನಪತ್ರಿಕೆ | 7–12–2010 |
| ಟೈಮ್ಸ್ ಆಫ್ ಇಂಡಿಯಾ ಆಂಗ್ಲ ದಿನಪತ್ರಿಕೆ | 7–12–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರು ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ಅನ್ನು ದಿನಾಂಕ : 20–1–2011ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | |
|---|---|---|
| | ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 1,78,18,084/– |
| | ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ (2010–11) ಟೆಂಡರಿಗೆ ಇಡಲಾದ ಮೊತ್ತ | ರೂ. 1,78,18,084/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1. | ಎ.ಎಸ್. ಪಾಟೀಲ ಪ್ರಥಮ ದರ್ಜೆ ಗುತ್ತಿಗೆದಾರರು | 2,01,21,169/– | 12.93 ಹೆಚ್ಚು | 12.93 ಹೆಚ್ಚು |
| 2. | ಜಿ. ಮಸ್ತಾನಯ್ಯ ಪ್ರಥಮ ದರ್ಜೆ ಗುತ್ತಿಗೆದಾರರು | 2,04,75,458/– | 14.91 ಹೆಚ್ಚು | 14.91 ಹೆಚ್ಚು |

ಮೇಲ್ಕಂಡಂತೆ ಶ್ರೀ ಎ.ಎಸ್. ಪಾಟೀಲ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಕಡಿಮೆ ದರಗಳನ್ನು ನಮೂದಿಸಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 12.93 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ : 19–2–2011 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಗುತ್ತಿಗೆದಾರರು ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ. 12.00 ರಷ್ಟು ಹೆಚ್ಚಿನ ದರದಲ್ಲಿ ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಅಂಗೀಕರಿಸಬಹುದೆಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,78,18,084/– ಗಳ ಮೇಲೆ ಶೇ. 6.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,88,87,169/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 02 ಅಪಿಬಂ (ತಾಂತ್ರಿಕ) 2011, ಬೆಂಗಳೂರು, ದಿನಾಂಕ : 07ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆಯ ಬಿಜಾಪುರ ತಾಲ್ಲೂಕಿನ ಕಾರಜೋಳ–ದೂಡಿಹಾಳ ಗ್ರಾಮಗಳ ಹತ್ತಿರ ನಾಲಾಕ್ಕೆ ಅಡ್ಡಲಾಗಿ ಸೇತುವೆಯನ್ನೊಳಗೊಂಡ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,78,18,084/–ಗಳ ಮೇಲೆ ಶೇ 6.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,88,87,169/– ಗಳಿಗೆ (ರೂ ಒಂದು

ಕೋಟಿ ಎಂಬತ್ತೆಂಟು ಲಕ್ಷ ಎಂಬತ್ತೇಳು ಸಾವಿರದ ಒಂದು ನೂರ ಅರವತ್ತೊಂಬತ್ತು) ಶ್ರೀ ಎ.ಎಸ್. ಪಾಟೀಲ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–1–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 761 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಯಾದಗಿರಿ ಜಿಲ್ಲೆ ಹಾಗೂ ತಾಲ್ಲೂಕಿನ ಜಿನಕೇರಾ–ಶೆಟ್ಟಿಕೇರಾ ಗ್ರಾಮಗಳ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಟೆಂಡರ್ ಕುರಿತು

**ಓದಲಾಗಿದೆ :** 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ : ಮುಇಂ/ಸನೀ(ಉ)ವ/ಬಿಜಾ/ಎಇ–5/2010–11/821 ದಿನಾಂಕ : 15–2–2011.

2) ಸರ್ಕಾರದ ಆದೇಶ ಸಂಖ್ಯೆ : ಸನೀಇ 236 ಮಸಾವಿ 2009(8), ಬೆಂಗಳೂರು, ದಿನಾಂಕ : 24–12–2009.

3) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ : 5–3–2011ರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/10–11/454.

**ಪ್ರಸ್ತಾವನೆ :**

ಯಾದಗಿರಿ ಜಿಲ್ಲೆ ಹಾಗೂ ತಾಲ್ಲೂಕಿನ ಜಿನಕೇರಾ–ಶೆಟ್ಟಿಕೇರಾ ಗ್ರಾಮಗಳ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಎ.ಐ.ಬಿ.ಪಿ ಕಾರ್ಯಕ್ರಮದಡಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ಬಿಜಾಪುರರವರ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 25–11–2010 |
| ಜಿಲ್ಲಾ ಟೆಂಡರ್ ಬುಲೆಟಿನ್ | 27–11–2010 |
| ಕರ್ನಾಟಕ ರಾಜ್ಯ ಪತ್ರ | 25–11–2010 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ/ದಿ ಹಿಂದೂ ಆಂಗ್ಲ ದಿನಪತ್ರಿಕೆ | 24–11–2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರು ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ಅನ್ನು ದಿನಾಂಕ : 10–1–2011ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 3,70,95,257/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ (2010–11) ಟೆಂಡರಿಗೆ ಇಡಲಾದ ಮೊತ್ತ | ರೂ. 5,17,92,151/– |

| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|
| ಮೆ: ಪದ್ಮಾವತಿ ಮೋತಿಲಾಲ ಕೊಟೇಚಾ (ತಾಪಿ ಪ್ರೀ ಸ್ಟ್ರೆಸ್ಸಡ್ ಪ್ರಾಡಕ್ಟ್ ಲಿಮಿಟೆಡ್) ಪ್ರಥಮ ದರ್ಜೆ ಗುತ್ತಿಗೆದಾರರು | 5,83,51,266 | 57.30 ಹೆಚ್ಚು | 12.66 ಹೆಚ್ಚು |

ಮೇಲ್ಕಂಡಂತೆ ಮೆ: ಪದ್ಮಾವತಿ ಮೋತಿಲಾಲ ಕೊಟೇಚಾ (ತಾಪಿ ಪ್ರೀ ಸ್ಟ್ರೆಸ್ಸಡ್ ಪ್ರಾಡಕ್ಟ್ಸ್ ಲಿಮಿಟೆಡ್), 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಭಾಗವಹಿಸಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 12.66 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ : 19–2–2011 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಗುತ್ತಿಗೆದಾರರು ಪತ್ರವನ್ನು ನೀಡಿ ಪರಿಷ್ಕೃತ ದರಗಳ ಮೇಲೆ ಶೇ. 9.00 ರಷ್ಟು ಹೆಚ್ಚಿನ ದರದಲ್ಲಿ ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಅಂಗೀಕರಿಸಬಹುದೆಂದು ಇಲಾಖಾ ಟೆಂಡರ್

ಪರಿಶೀಲನಾ ಸಮಿತಿಯು ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ. ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 5,17,92,151/– ಗಳ ಮೇಲೆ ಶೇ. 7.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 5,56,76,562/– ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 01 ಏನೀಯೋ (ತಾಂತ್ರಿಕ) 2011, ಬೆಂಗಳೂರು, ದಿನಾಂಕ : 07ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಯಾದಗೀರ ಜಿಲ್ಲೆ ಹಾಗೂ ತಾಲ್ಲೂಕಿನ ಜಿನಕೇರಾ–ಶೆಟ್ಟಿಕೇರಾ ಗ್ರಾಮಗಳ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 5,17,92,151/–ಗಳ ಮೇಲೆ ಶೇ 7.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 5,56,76,562/– ಗಳಿಗೆ (ರೂ ಐದು ಕೋಟಿ ಐವತ್ತಾರು ಲಕ್ಷ ಎಪ್ಪತ್ತಾರು ಸಾವಿರದ ಐದು ನೂರ ಅರವತ್ತೆರಡು) ಮೆ: ಪದ್ಮಾವತಿ ಮೋತಿಲಾಲ ಕೊಟೇಚಾ (ತಾಪಿ ಪ್ರೀ ಸ್ಟ್ರೆಸ್ಡ್ ಪ್ರಾಡಕ್ಟ್ಸ್ ಲಿಮಿಟೆಡ್), 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–1–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 762 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಜಲ ಸಂಪನ್ಮೂಲ ಸಚಿವಾಲಯ

## ತಿದ್ದುಪಡಿ

**ಸಂಖ್ಯೆ : ಸನೀಇ 05 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ : 9–3–2011.**

ಸರ್ಕಾರದ ಆದೇಶ ಸನೀಇ 05–ಭೂಸ್ವಾಪ್ರ 2010 ದಿನಾಂಕ : 15–2–2011ರ ಆದೇಶ ಭಾಗದ ಎರಡನೇ ಪ್ಯಾರದಲ್ಲಿನ ಲೆಕ್ಕಶೀರ್ಷಿಕೆ " 4702–0–1–101–02–139 ಹೊಸಕೆರೆಗಳ ನಿರ್ಮಾಣ ಪ್ರಧಾನ ಕಾಮಗಾರಿಗಳು" ರ ಬದಲಾಗಿ ಲೆಕ್ಕ ಶೀರ್ಷಿಕೆ "4702–00–101–1–02–436 ಹೊಸಕೆರೆಗಳ ನಿರ್ಮಾಣ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 763 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ನೂತನ ಜಿಲ್ಲೆಯಾಗಿ ರಚನೆಗೊಂಡಿರುವ ಯಾದಗಿರಿಗೆ ಹೊಸದಾಗಿ ಹುದ್ದೆಗಳನ್ನು ಸೃಜಿಸುವ ಹಾಗೂ ಮರುವಿನ್ಯಾಸಗೊಳಿಸುವಿಕೆ.

**ಓದಲಾಗಿದೆ :** 1) ಸರ್ಕಾರಿ ಅಧಿಸೂಚನೆ ಸಂಖ್ಯೆ : ಆರ್‌ಡಿ 59 ಭೂದಾಮ 2008, ದಿನಾಂಕ : 26–12–2009.
2) ಸರ್ಕಾರದ ಆದೇಶ ಸಂಖ್ಯೆ : ಕಂಇ ಭೂದಾಮ 2009, ದಿನಾಂಕ 23–2–2010.
3) ಸರ್ಕಾರದ ಆದೇಶ ಸಂಖ್ಯೆ : ಪಸಂಮೀ 517 ಪಸಸೇ 2009, ದಿನಾಂಕ 6–5–2010.
4) ಸರ್ಕಾರದ ಆದೇಶ ಸಂಖ್ಯೆ : ಕಂಇ 71 ಭೂದಾಮ 2009, ದಿನಾಂಕ 26–7–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಗುಲ್ಬರ್ಗಾ ಜಿಲ್ಲೆಯನ್ನು ವಿಭಜಿಸಿ ಯಾದಗಿರ್, ಶಹಾಪುರ ಹಾಗೂ ಶೋರಾಪುರ್ ತಾಲ್ಲೂಕುಗಳನ್ನೊಳಗೊಂಡಂತೆ ಹೊಸದಾಗಿ ಯಾದಗಿರ್ ಜಿಲ್ಲೆಯನ್ನು ರಚಿಸಲಾಗಿದೆ.

2. ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಕಂದಾಯ ಇಲಾಖೆಯು ಯಾದಗಿರಿ ಜಿಲ್ಲೆಯಲ್ಲಿ ವಿವಿಧ ಇಲಾಖೆಗಳಿಗೆ ಸಂಬಂಧಿಸಿದಂತೆ ಸಿಬ್ಬಂದಿ ಮಾದರಿ ರಚನೆ ಅನ್ವಯ ಅವಶ್ಯಕವಿರುವ ಹುದ್ದೆಗಳಲ್ಲಿ ಶೇ 25 ರಷ್ಟು ಹುದ್ದೆಗಳನ್ನು ಸದ್ಯಕ್ಕೆ ಅಡ್–ಹಾಕ್ ಆಧಾರದ ಮೇಲೆ ಸೃಜಿಸಲು ಮಂಜೂರಾತಿ ನೀಡಿದೆ ಹಾಗೂ ಸಂಬಂಧಪಟ್ಟ ಇಲಾಖೆಗಳು ಅವಶ್ಯಕತೆ ಇರುವ ಹುದ್ದೆಗಳನ್ನು ಗುರುತಿಸಿ ಪ್ರತ್ಯೇಕವಾಗಿ ಆದೇಶ ಹೊರಡಿಸಿ ಶೀಘ್ರವಾಗಿ ಭರ್ತಿ ಮಾಡಿಕೊಳ್ಳುವಂತೆ ಮತ್ತು ಈ ಹುದ್ದೆಗಳಿಗೆ ಆಯವ್ಯಯ ಅವಕಾಶವನ್ನು ಸಹ ಕಲ್ಪಿಸಲು ಕ್ರಮ ಕೈಗೊಳ್ಳುವಂತೆ ಆದೇಶಿಸಲಾಗಿತ್ತು.

3. ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಆದೇಶದಲ್ಲಿ ನೂತನವಾಗಿ ರಚನೆಗೊಂಡಿರುವ ಯಾದಗಿರಿ ಜಿಲ್ಲೆಯಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಗೆ ಸಂಬಂಧಿಸಿದಂತೆ ಉಪ ನಿರ್ದೇಶಕರು (1 ಹುದ್ದೆ), ಪ್ರಥಮ ದರ್ಜೆ ಸಹಾಯಕರು (1 ಹುದ್ದೆ) ಬೆರಳಚ್ಚುಗಾರರು (1 ಹುದ್ದೆ) ಪಶುವೈದ್ಯಕೀಯ ಪರೀಕ್ಷಕರು (1 ಹುದ್ದೆ) ಒಳಗೊಂಡಂತೆ ಒಟ್ಟು 4 ಹುದ್ದೆಗಳನ್ನು ಅಡ್–ಹಾಕ್ (Ad-hoc) ಆಧಾರದ ಮೇಲೆ ಸೃಜಿಸಿ ಹಾಗೂ ಒಂದು ಅಟೆಂಡರ್ ಹುದ್ದೆಯನ್ನು ಉಪ ನಿರ್ದೇಶಕರ ಕಛೇರಿ, ಗುಲ್ಬರ್ಗಾದಿಂದ ಯಾದಗಿರಿ ಜಿಲ್ಲೆಗೆ ಮರುವಿನ್ಯಾಸಗೊಳಿಸಿ ಆದೇಶಿಸಲಾಗಿದೆ.

4. ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಆದೇಶದಲ್ಲಿ ಕಂದಾಯ ಇಲಾಖೆ ಅವಿಭಾಜಿತ ಗುಲ್ಬರ್ಗಾ ಜಿಲ್ಲೆಯ ವಿವಿಧ ಕಛೇರಿಗಳಿಂದ ಒಟ್ಟು 209 ಹುದ್ದೆಗಳನ್ನು ಕಡಿತಗೊಳಿಸಿ ಅಷ್ಟೂ ಹುದ್ದೆಗಳನ್ನು ಹೊಸ ಯಾದಗಿರಿ ಜಿಲ್ಲೆಗೆ ವರ್ಗಾಯಿಸಲು ಹಾಗೂ ಹೊಸ ಯಾದಗಿರಿ ಜಿಲ್ಲೆಯ 59 ಇಲಾಖೆಗಳಿಗೆ ಅಗತ್ಯವಾದ 750 ಹೊಸ ಹುದ್ದೆಗಳನ್ನು (ಈಗಾಗಲೇ ಅಡ್‌ಹಾಕ್ ಆಧಾರದ ಮೇರೆಗೆ ಸೃಜಿಸಿರುವ ಶೇ 25 ರಷ್ಟು ಹುದ್ದೆಗಳನ್ನು ಒಳಗೊಂಡಂತೆ) ಸೃಜಿಸಲು ಮಂಜೂರಾತಿ ನೀಡಿದ್ದು, ಅದರಂತೆ ಯಾದಗಿರಿ ಜಿಲ್ಲೆಯ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಗೆ

ಸಂಬಂಧಿಸಿದಂತೆ ಗ್ರೂಪ್ "ಎ" ವೃಂದದಲ್ಲಿ ಉಪ ನಿರ್ದೇಶಕರು (1 ಹುದ್ದೆ) ಸಹಾಯಕ ನಿರ್ದೇಶಕರು (1 ಹುದ್ದೆ), ಗ್ರೂಪ್ "ಸಿ" ವೃಂದದಲ್ಲಿ ಕಛೇರಿ ಅಧೀಕ್ಷಕರು (1 ಹುದ್ದೆ) ಪ್ರಥಮ ದರ್ಜೆ ಸಹಾಯಕರು (2 ಹುದ್ದೆ) ದ್ವಿತೀಯ ದರ್ಜೆ ಸಹಾಯಕರು (2 ಹುದ್ದೆ) ಬೆರಳಚ್ಚುಗಾರರು (1 ಹುದ್ದೆ), ಪಶುವೈದ್ಯಕೀಯ ಪರೀಕ್ಷಕರು (1 ಹುದ್ದೆ) ಪಶುವೈದ್ಯಕೀಯ ಸಹಾಯಕರು (1 ಹುದ್ದೆ), ವಾಹನ ಚಾಲಕರು (2 ಹುದ್ದೆ) ಮತ್ತು ಗ್ರೂಪ್ "ಡಿ" ವೃಂದದಲ್ಲಿ ಅಟೆಂಡರ್ (1 ಹುದ್ದೆ) ಸೇರಿದಂತೆ ಒಟ್ಟು 13 ಹುದ್ದೆಗಳನ್ನು ಹೊಸದಾಗಿ ಸೃಜಿಸಲು ಮತ್ತು 1 ಅಟೆಂಡರ್ ಹುದ್ದೆಯನ್ನು ಗುಲ್ಬರ್ಗಾ ಜಿಲ್ಲೆಯಿಂದ ಮರುವಿನ್ಯಾಸಗೊಳಿಸಲು (Redeployment) ಆದೇಶಿಸಿರುತ್ತದೆ.

5. ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಯಾದಗಿರಿ ಜಿಲ್ಲೆಗೆ ದಿನಾಂಕ : 6–5–2010ರ ಸರ್ಕಾರಿ ಆದೇಶದಲ್ಲಿ ಅಡ್ ಹಾಕ್ ಆಧಾರದ ಮೇಲೆ ಹೊಸದಾಗಿ ಸೃಜಿಸಲಾಗಿದ್ದ ಉಪ ನಿರ್ದೇಶಕರು, ಪ್ರಥಮ ದರ್ಜೆ ಸಹಾಯಕರು ಮತ್ತು ಡಿ–ದರ್ಜೆ ನೌಕರರು (ಮರುವಿನ್ಯಾಸ) ಹುದ್ದೆಗಳನ್ನು ಭರ್ತಿ ಮಾಡಲಾಗಿದ್ದು, ಬೆರಳಚ್ಚುಗಾರ ಮತ್ತು ಪಶುವೈದ್ಯಕೀಯ ಪರೀಕ್ಷಕರ ಹುದ್ದೆಗಳನ್ನು ತುಂಬಿರುವುದಿಲ್ಲವೆಂದು ತಿಳಿಸಿರುತ್ತಾರೆ. ದಿನಾಂಕ : 26–7–2010ರ ಆದೇಶದನ್ವಯ ಸಹಾಯಕ ನಿರ್ದೇಶಕರು (1 ಹುದ್ದೆ), ಕಛೇರಿ ಅಧೀಕ್ಷಕರು (1 ಹುದ್ದೆ), ಪ್ರಥಮ ದರ್ಜೆ ಸಹಾಯಕರು (2 ಹುದ್ದೆ), ದ್ವಿತೀಯ ದರ್ಜೆ ಸಹಾಯಕರು (2 ಹುದ್ದೆ) ಪಶುವೈದ್ಯಕೀಯ ಸಹಾಯಕರು (1 ಹುದ್ದೆ), ವಾಹನ ಚಾಲಕರು (2 ಹುದ್ದೆ), ಡಿ–ದರ್ಜೆ ನೌಕರರು (1 ಹುದ್ದೆ)ಗಳನ್ನು ಒಳಗೊಂಡಂತೆ ಒಟ್ಟು 9 ಹುದ್ದೆಗಳನ್ನು ಹೊಸದಾಗಿ ಸೃಜನೆ ಮಾಡಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ. ಉಪ ನಿರ್ದೇಶಕರ ಕಛೇರಿ, ಯಾದಗಿರಿ ಜಿಲ್ಲೆಯಲ್ಲಿ ಅಡ್‌ಹಾಕ್ ಆಧಾರದ ಮೇಲೆ ಈಗಾಗಲೇ ಸೃಜನೆಯಾಗಿರುವ 4 ಹುದ್ದೆಗಳು ಮತ್ತು ಗುಲ್ಬರ್ಗಾ ಜಿಲ್ಲೆಯಿಂದ ಮರುವಿನ್ಯಾಸ ಮೂಲಕ ತುಂಬಲಾದ ಒಂದು ಹುದ್ದೆ ಸೇರಿ 5 ಹುದ್ದೆಗಳು ಮತ್ತು ಹೊಸದಾಗಿ ಸೃಜಿಸಬೇಕಾಗಿರುವ 9 ಹುದ್ದೆಗಳು ಉಪ ನಿರ್ದೇಶಕರ ಕಛೇರಿಯಲ್ಲಿನ ದೈನಂದಿನ ಕರ್ತವ್ಯಗಳನ್ನು ನಿರ್ವಹಿಸಲು ಅತಿ ಅವಶ್ಯಕವಾಗಿ ಬೇಕಾಗಿರುತ್ತದೆಂದು, ಹುದ್ದೆಗಳ ವೆಚ್ಚ ಭರಿಸಲು ವಾರ್ಷಿಕ ರೂ. 21.83 ಲಕ್ಷಗಳ ವಂಟನದ ಅವಶ್ಯಕವಾಗಿರುತ್ತದೆಂದು ತಿಳಿಸಿ, ಲೆಕ್ಕಶೀರ್ಷಿಕೆ 2403–00–101–0–71 ಯೋಜನೆ ಅಡಿಯಲ್ಲಿ 9 ಹುದ್ದೆಗಳನ್ನು ಹೊಸದಾಗಿ ಸೃಜನೆ ಮಾಡಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ

6. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅಡ್‌ಹಾಕ್ (Ad-hoc) ಆಧಾರದ ಮೇಲಿನ ಹುದ್ದೆಗಳನ್ನು ದೈನಂದಿನ ಕೆಲಸ ಕಾರ್ಯಗಳ ದೃಷ್ಟಿಯಿಂದ ತಾತ್ಕಾಲಿಕವಾಗಿ ಸೃಜಿಸುವುದಾಗಿರುತ್ತದೆ. ಕಂದಾಯ ಇಲಾಖೆಯ ದಿನಾಂಕ : 26–7–2010ರ ಆದೇಶದಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಗೆ ಸಂಬಂಧಿಸಿದಂತೆ ಉಪ ನಿರ್ದೇಶಕರು (1 ಹುದ್ದೆ), ಸಹಾಯಕ ನಿರ್ದೇಶಕರು (1 ಹುದ್ದೆ), ಕಛೇರಿ ಅಧೀಕ್ಷಕರು (1 ಹುದ್ದೆ), ಪ್ರಥಮ ದರ್ಜೆ ಸಹಾಯಕರು (2 ಹುದ್ದೆ), ದ್ವಿತೀಯ ದರ್ಜೆ ಸಹಾಯಕರು (2 ಹುದ್ದೆ), ಬೆರಳಚ್ಚುಗಾರರು (1 ಹುದ್ದೆ), ಪಶುವೈದ್ಯಕೀಯ ಪರೀಕ್ಷಕರು (1 ಹುದ್ದೆ), ಪಶುವೈದ್ಯಕೀಯ ಸಹಾಯಕರು (1 ಹುದ್ದೆ), ವಾಹನ ಚಾಲಕರು (2 ಹುದ್ದೆ) ಅಟೆಂಡರ್ (1 ಹುದ್ದೆ) ಒಳಗೊಂಡಂತೆ 13 ಹುದ್ದೆಗಳನ್ನು ಹೊಸದಾಗಿ ಸೃಜಿಸಲು ಹಾಗೂ 1 ಹುದ್ದೆಯನ್ನು ಗುಲ್ಬರ್ಗಾ ಜಿಲ್ಲೆಯಿಂದ ಯಾದಗಿರಿಗೆ ಮರುವಿನ್ಯಾಸಗೊಳಿಸಲು ಮಂಜೂರಾತಿ (ಈಗಾಗಲೇ ಸೃಜಿಸಿರುವ/ಮರುವಿನ್ಯಾಸಗೊಳಿಸಿರುವ ಅಡ್‌ಹಾಕ್ ಹುದ್ದೆಗಳನ್ನು ಒಳಗೊಂಡಂತೆ) ನೀಡಿದೆ. ಯಾದಗಿರಿ ಜಿಲ್ಲೆಯ ಉಪ ನಿರ್ದೇಶಕರ ಕಛೇರಿಯ ದೈನಂದಿನ ಕಾರ್ಯಗಳ ದೃಷ್ಟಿಯಿಂದ ಅಡ್–ಹಾಕ್ ಹುದ್ದೆಗಳನ್ನು ಶಾಶ್ವತವಾಗಿ ಮುಂದುವರೆಸಬೇಕಾಗುತ್ತದೆ ಹಾಗೂ ಸಿಬ್ಬಂದಿ ಮಾದರಿ (Staff Pattern) ಅನ್ವಯ ಅವಶ್ಯಕವಾದ ಇತರೆ ಹುದ್ದೆಗಳನ್ನು ಸೃಜಿಸಬೇಕಾಗುತ್ತದೆ. ಈ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ನೂತನವಾಗಿ ರಚನೆಗೊಂಡಿರುವ ಯಾದಗಿರಿ ಜಿಲ್ಲೆಯಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಗೆ ಸಂಬಂಧಿಸಿದಂತೆ ಈಗಾಗಲೇ ಅಡ್–ಹಾಕ್ ಮೇಲೆ ಸೃಜಿಸಿದ್ದ 4 ಹುದ್ದೆಗಳನ್ನು ಒಳಗೊಂಡಂತೆ ಒಟ್ಟು 13 ಹುದ್ದೆಗಳನ್ನು ಹೊಸದಾಗಿ ಸೃಜಿಸಲು ಹಾಗೂ 1 ಅಟೆಂಡರ್ ಹುದ್ದೆಯನ್ನು ಮರುವಿನ್ಯಾಸಗೊಳಿಸಲು (Redeployment) ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಪಸಂಮೀ 517 ಪಸಸೇ 2009, ಬೆಂಗಳೂರು, ದಿನಾಂಕ : 07ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ನೂತನವಾಗಿ ರಚನೆಗೊಂಡಿರುವ ಯಾದಗಿರಿ ಜಿಲ್ಲೆಯ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯ ಜಿಲ್ಲಾ ಮಟ್ಟದ ಉಪ ನಿರ್ದೇಶಕರ ಕಛೇರಿಯ ದೈನಂದಿನ ಕಾರ್ಯಚಟುವಟಿಕೆಗಳ ದೃಷ್ಟಿಯಿಂದ ಈ ಕೆಳಕಂಡ 13 ಹುದ್ದೆಗಳನ್ನು ಹೊಸದಾಗಿ ಸೃಜನೆ ಮಾಡಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆ | ವೃಂದ | ವೇತನ ಶ್ರೇಣಿ | ಹೊಸದಾಗಿ ಸೃಜಿಸಬೇಕಾದ ಹುದ್ದೆ ಸಂಖ್ಯೆ |
|---|---|---|---|---|
| 1 | ಉಪ ನಿರ್ದೇಶಕರು | ಎ | ರೂ. 18,150–26,925 | 01 |
| 2 | ಸಹಾಯಕ ನಿರ್ದೇಶಕರು | ಎ | ರೂ. 14,050–25,050 | 01 |
| 3 | ಕಛೇರಿ ಅಧೀಕ್ಷಕರು | ಸಿ | ರೂ. 10,000–18,150 | 01 |
| 4 | ಪ್ರಥಮ ದರ್ಜೆ ಸಹಾಯಕರು | ಸಿ | ರೂ. 7,275–13,350 | 02 |
| 5 | ದ್ವಿತೀಯ ದರ್ಜೆ ಸಹಾಯಕರು | ಸಿ | ರೂ. 5,800–10,500 | 02 |
| 6 | ಬೆರಳಚ್ಚುಗಾರರು | ಸಿ | ರೂ. 5,800–10,500 | 01 |
| 7 | ಪಶುವೈದ್ಯಕೀಯ ಪರೀಕ್ಷಕರು | ಸಿ | ರೂ. 6,250–12,000 | 01 |
| 8 | ಪಶುವೈದ್ಯಕೀಯ ಸಹಾಯಕರು | ಸಿ | ರೂ. 5,800–10,500 | 01 |
| 9 | ವಾಹನ ಚಾಲಕರು | ಸಿ | ರೂ. 5,800–10,500 | 02 |
| 10 | ಅಟೆಂಡರ್ | ಡಿ | ರೂ. 4,800–7275 | 01 |
| | ಒಟ್ಟು ಹುದ್ದೆಗಳು | | | 13 |

ಮೇಲ್ಕಂಡವಲ್ಲದೆ ಒಂದು ಅಟೆಂಡರ್ (ವೇತನ ಶ್ರೇಣಿ ರೂ. 4,800–7,275) ಹುದ್ದೆಯನ್ನು ಉಪ ನಿರ್ದೇಶಕರ ಕಛೇರಿ, ಗುಲ್ಬರ್ಗಾದಿಂದ ಯಾದಗಿರಿ ಜಿಲ್ಲೆಯ ಉಪ ನಿರ್ದೇಶಕರ ಕಛೇರಿಗೆ ಮರುವಿನ್ಯಾಸಗೊಳಿಸ (Redeployment) ಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಪಿ. ನಾಗರಾಜ**

ಪೀಠಾಧಿಕಾರಿ–2,

ಪಿ.ಆರ್. 764

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

(ಪಶುಸಂಗೋಪನೆ–ಎ).

## INFRASTRUCTURE DEVELOPMENT SECRETARIAT

## CORRIGENDUM

**No. IDD 46 NSW 2010, Bangalore, Dated 08-03-2011**

Para (3) of the order portion of G.O. No. IDD 46 NSW 2010 dated 25.02.2011 shall be corrected and read as under:-

"The Deputy Commissioner, Bagalkot is authorized to draw the amount in the District Treasury, Bagalkot and the Deputy Director, NMC to upload the said amount to the Deputy Commissioner's Account. The Deputy Commissioner to incur the expenditure for this project and to submit the utilization certificate for the same".

The other paras remains unaltered.

By Order and in the name of the Governor of Karnataka

**C.A. Baburavindranath Patel**

Under Secretary to Government

Infrastructure Development Department

P.R. 772

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ರೇಷ್ಮೆ ಇಲಾಖೆಯ ರೇಷ್ಮೆ ನಿರ್ದೇಶನಾಲಯಕ್ಕೆ ಹೊಸ ಕಾರನ್ನು ಖರೀದಿಸುವ ಬಗ್ಗೆ.

**ಓದಲಾಗಿದೆ :** 1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸಿಬ್ಬಂದಿ (2)/ವಾಹನ/ಖರೀದಿ/59/2007–08, ದಿ: 18–12–2010.

2. ಸರ್ಕಾರಿ ಆದೇಶ ಸಂಖ್ಯೆ: ವಾಕೈ 45 ರೆಯೋವಿ 2007, ದಿನಾಂಕ: 6–11–2007.

**ಪ್ರಸ್ತಾವನೆ:**

ರೇಷ್ಮೆ ನಿರ್ದೇಶನಾಲಯಕ್ಕೆ ಹಳೆಯ ಒಂದು ಕಾರನ್ನು ನಿರುಪಯುಕ್ತಗೊಳಿಸುವ (condemned) ಷರತ್ತಿಗೊಳಪಟ್ಟು ರೂ. 6.50 ಲಕ್ಷಗಳಲ್ಲಿ ಒಂದು ಹೊಸ ಕಾರನ್ನು ಖರೀದಿಸುವುದಕ್ಕೆ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿತ್ತು. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಉಪಯೋಗಕ್ಕಾಗಿ ದಿನಾಂಕ: 16–11–2007 ರಲ್ಲಿ ಖರೀದಿಸಿದ ವಾಹನ ಸಂಖೆ: ಕೆಎ–01, ಜಿಎ–3000 ವಾಹನವು ರಾಜ್ಯವ್ಯಾಪಿ ಓಡಾಡಿ ಈಗ ಸಣ್ಣ ಪ್ರಮಾಣದ ದುರಸ್ತಿಗೆ ಬರಲು ಪ್ರಾರಂಭವಾಗಿದ್ದು, ಮಾರ್ಗಮಧ್ಯದಲ್ಲಿ ಕೆಟ್ಟುನಿಲ್ಲುತ್ತಿರುವುದಾಗಿ, ಈಗಿನ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಉನ್ನತ ಶ್ರೇಣಿಯ ಹಿರಿಯ ಐಎಎಸ್ ಅಧಿಕಾರಿಯಾಗಿದ್ದು, ಸದರಿಯವರು ರಾಜ್ಯವ್ಯಾಪ್ತಿಯ ಅಧಿಕಾರಿಯಾಗಿರುತ್ತಾರೆ. ಇವರ ಉಪಯೋಗಕ್ಕಾಗಿ ಸುಸಜ್ಜಿತ ವಾಹನದ ಅಗತ್ಯತೆ ಇರುತ್ತದೆ. ಅಲ್ಲದೇ ಅಪರ ನಿರ್ದೇಶಕರು (ಆಡಳಿತ) ಹುದ್ದೆಗೆ ಸೂಪರ್ ಟೈಂ ಸ್ಕೇಲ್ ಶ್ರೇಣಿಯ ಅಧಿಕಾರಿಯನ್ನು ನಿಯೋಜಿಸಿದ್ದು, ಸದರಿ ಹುದ್ದೆಯು ಸಹ ರಾಜ್ಯವ್ಯಾಪಿ ಹುದ್ದೆಯಾಗಿರುತ್ತದೆ. ಇವರಿಗೆ ಒದಗಿಸಿರುವ ವಾಹನವನ್ನು 1994 ರಲ್ಲಿ ಖರೀದಿಸಿದ್ದು, ಅದು ಸಹ ದೊಡ್ಡ ಪ್ರಮಾಣದ ದುರಸ್ತಿಗೆ ಬರಲಾರಂಭಿಸಿದೆಯಾದ್ದರಿಂದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಹಾಗೂ ಅಪರ ನಿರ್ದೇಶಕರು (ಆಡಳಿತ) ಇವರ ಉಪಯೋಗಕ್ಕಾಗಿ 2 ವಾಹನಗಳನ್ನು ಕ್ರಮವಾಗಿ ರೂ. 9,14,672–00 ಮತ್ತು ರೂ. 7,58,552–00 ಗಳ ವೆಚ್ಚದಲ್ಲಿ ಖರೀದಿಸಲು ಸರ್ಕಾರದ ಅನುಮತಿ ನೀಡುವಂತೆ ಹಾಗೂ ಸದರಿ ವೆಚ್ಚವನ್ನು ಕೇಂದ್ರ ರೇಷ್ಮೆ ಮಂಡಳಿಯು 2010–11 ನೇ ಸಾಲಿನಲ್ಲಿ Training and Beneficiaries Empowerment ನೀಡಿರುವ ಅನುದಾನದಲ್ಲಿ ಭರಿಸಲು ಅನುಮತಿ ನೀಡುವಂತೆ ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಸರ್ಕಾರವನ್ನು ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಉನ್ನತ ಶ್ರೇಣಿಯ ಐಎಎಸ್ ಅಧಿಕಾರಿಯಾಗಿದ್ದು, ಅವರ ವಾಹನವು ದುರಸ್ತಿಗೆ ಬರಲು ಪ್ರಾರಂಭವಾಗಿದೆಯೆಂದು ಅವರು ತಿಳಿಸಿರುವುದರಿಂದ ಸದರಿ ವಾಹನವನ್ನು ಬದಲಾಯಿಸಿ ಅವರ ಉಪಯೋಗಕ್ಕಾಗಿ ಹೊಸ ವಾಹನ ಖರೀದಿಗೆ ಅನುಮತಿ ನೀಡಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂ: ವಾಕೈ 35 ರೇಯೋವಿ 2010 ಬೆಂಗಳೂರು, ದಿನಾಂಕ 14–3–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಳೆಯ ಒಂದು ಕಾರನ್ನು ನಿರುಪಯುಕ್ತಗೊಳಿಸಬೇಕೆಂಬ (condemned) ಷರತ್ತಿಗೊಳಪಟ್ಟು, ರೂ. 6.50 ಲಕ್ಷಗಳಿಗೆ (ರೂಪಾಯಿ ಆರು ಲಕ್ಷ ಐವತ್ತು ಸಾವಿರಗಳು ಮಾತ್ರ) ಹೊಸ ಕಾರನ್ನು ಖರೀದಿಸುವುದಕ್ಕೆ, ಖರೀದಿಗೆ ಕುರಿತಂತೆ ಇರುವ ಸರ್ಕಾರದ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕೆಂಬ ಷರತ್ತಿಗೊಳಪಟ್ಟು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2851–00–107–1–01–195 ಸಾರಿಗೆ ವೆಚ್ಚಗಳು (ಯೋಜನೇತರ) ಇದರಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD/96/Exp-1/2011, ದಿನಾಂಕ: 10–3–2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 773

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀಮತಿ ಡಿ. ಸರಸ್ವತಮ್ಮ, ರೇಷ್ಮೆ ಪ್ರವರ್ತಕರು, ರೇಷ್ಮೆ ಬಿತ್ತನೆ ಕೋಠಿ, ಕುದೂರು ಇವರ ಪರೀಕ್ಷಾರ್ಥ ಅವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** 1. ಅಧಿಕೃತ ಜ್ಞಾಪನ ಸಂಖ್ಯೆ: ಸಿ1(5)/ರೇಪ್ರವ/ಪಅವಿ/28/2010–11, ದಿನಾಂಕ: 6–12–2010.

2. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸಿ1(5)/ರೇಪ್ರವ/ಪಅವಿ/28/2010–11, ದಿನಾಂಕ: 6–12–2010.

**ಪ್ರಸ್ತಾವನೆ:**

ಶ್ರೀಮತಿ ಡಿ. ಸರಸ್ವತಮ್ಮ, ರೇಷ್ಮೆ ಪ್ರವರ್ತಕರು, ರೇಷ್ಮೆ ಬಿತ್ತನೆ ಕೋಠಿ, ಕುದೂರು ಇವರು ರೇಷ್ಮೆ ಪ್ರವರ್ತಕರ ಹುದ್ದೆಗೆ ನೇಮಕಗೊಂಡು ದಿನಾಂಕ: 14–12–2005 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 13–12–2007 ರಂದು ಘೋಷಿಸಬೇಕಾಗಿತ್ತು. ಆದರೆ ಸದರಿಯವರು ಹುದ್ದೆಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳನ್ನು ನಿಗದಿತ ಅವಧಿಯಲ್ಲಿ ಪಾಸು ಮಾಡಿಕೊಳ್ಳದೇ ಪರೀಕ್ಷೆಯನ್ನು ದಿನಾಂಕ: 2–7–2009 ರಂದು ಪಾಸು ಮಾಡಿಕೊಂಡಿರುತ್ತಾರೆ. ನೇಮಕಾತಿ ಪ್ರಾಧಿಕಾರವಾದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ನೌಕರರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977 ರ ನಿಯಮ 4(1)(ii) ರನ್ವಯ ಒಂದು ವರ್ಷದ ಅವಧಿಗೆ ಅಂದರೆ ದಿನಾಂಕ: 14–12–2007 ರಿಂದ 13–12–2008 ರವರೆಗೆ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಅಧಿಕೃತ ಜ್ಞಾಪನದಲ್ಲಿ ವಿಸ್ತರಿಸಿ ಆದೇಶಿಸಿದ್ದು, ನೌಕರರ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 14–12–2008 ರಿಂದ 2–7–2009 ರವರೆಗೆ ವಿಸ್ತರಿಸಿ ಆದೇಶಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಸರ್ಕಾರವನ್ನು ಕೋರಿರುತ್ತಾರೆ.

ರೇಷ್ಮೆ ಆಯುಕ್ತರ ಕೋರಿಕೆಯಂತೆ ನೌಕರರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ವಿಷಯವನ್ನು ಸರ್ಕಾರವು ಪರಿಶೀಲಿಸಿದ್ದು, ನೌಕರರ ಕಾರ್ಯನಿರ್ವಹಣಾ ವರದಿಯು ತೃಪ್ತಿಕರವಾಗಿದ್ದು, ನೌಕರರು ನಿಗದಿತ ಇಲಾಖಾ ಪರೀಕ್ಷೆಗಳನ್ನು ಪಾಸುಮಾಡಿಕೊಂಡಿರುವುದರಿಂದ ಅವರ ಪರಿವೀಕ್ಷಣಾ ಅವಧಿಯನ್ನು ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳನ್ನು ಅವರು ಪಾಸು ಮಾಡಿದ ದಿನಾಂಕದವರೆಗೆ ವಿಸ್ತರಿಸಲು ತೀರ್ಮಾನಿಸಿದೆ.

**ಸರ್ಕಾರದ ಆದೇಶದ ಸಂಖ್ಯೆ: ವಾಕೈ 13 ರೇಇವಿ 2011, ಬೆಂಗಳೂರು, ದಿನಾಂಕ: 08.03.2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀಮತಿ ಡಿ. ಸರಸ್ವತಮ್ಮ, ರೇಷ್ಮೆ ಪ್ರವರ್ತಕರು, ರೇಷ್ಮೆ ಬಿತ್ತನೆ ಕೋಠಿ, ಕುದೂರು ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977 ರ ನಿಯಮ 4(1)( i)ರನ್ವಯ ದಿನಾಂಕ: 14–12–2008 ರಿಂದ 2–7–2009 ರವರೆಗೆ ವಿಸ್ತರಿಸಿದೆ.

ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿದ ಅವಧಿಗೆ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ನೌಕರರಿಗೆ ಕಾಲ್ಪನಿಕವಾಗಿ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗದಿಪಡಿಸಬಹುದು. ಆದರೆ, ವಿಸ್ತರಿಸಿದ ಅವಧಿಗೆ ಯಾವುದೇ ವೇತನ ಬಾಕಿಯನ್ನು ನೀಡುವಂತಿಲ್ಲವೆಂದು ಆದೇಶಿಸಿದೆ. ಈ ವಿಷಯದಲ್ಲಿ ಮೇಲ್ಕಂಡ ನಿಯಮಗಳ ನಿಯಮ 10 ರಂತೆ ಕ್ರಮ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭಾರತಿ ಆರ್. ನಾಯಕ್**

ಪಿ.ಆರ್. 774

ಪೀಠಾಧಿಕಾರಿ (ರೇಷ್ಮೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ರಾಜ್ಯ ಯೋಜನಾ ಮಂಡಳಿಯನ್ನು ಪುನರ್ರಚಿಸುವ ಬಗ್ಗೆ ಆದೇಶ.

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ: ಪಿಡಿ 117 ಸಿಓಪಿ 93, ದಿನಾಂಕ: 4.10.1993
2) ಸರ್ಕಾರದ ಆದೇಶ ಸಂಖ್ಯೆ: ಪಿಡಿ 55 ಪಿಆರ್ಐ 95, ದಿನಾಂಕ: 4.3.1995
3) ಸರ್ಕಾರದ ಆದೇಶ ಸಂಖ್ಯೆ: ಪಿಡಿ 288 ಪಿಆರ್‌ಪಿ 96, ದಿನಾಂಕ: 12.8.1996
4) ಸರ್ಕಾರದ ಆದೇಶ ಸಂಖ್ಯೆ: ಪಿಡಿ 249 ಪಿಆರ್ಐ 98, ದಿನಾಂಕ: 27.8.1998
5) ಸರ್ಕಾರದ ಆದೇಶ ಸಂಖ್ಯೆ: ಪಿಡಿ 38 ಎಸ್‌ಪಿಬಿ 2000(ಭಾ), ದಿನಾಂಕ: 17.7.2001
6) ಸರ್ಕಾರದ ಆದೇಶ ಸಂಖ್ಯೆ: ಪಿಡಿ 95 ಎಸ್‌ಪಿಬಿ 2003, ದಿನಾಂಕ: 27.10.2003
7) ಸರ್ಕಾರದ ಆದೇಶ ಸಂಖ್ಯೆ: ಪಿಡಿ 10 ಎಸ್‌ಪಿಬಿ 2005, ದಿನಾಂಕ: 20.11.2006
8) ಸರ್ಕಾರದ ಆದೇಶ ಸಂಖ್ಯೆ: ಪಿಡಿ 10 ಎಸ್‌ಪಿಬಿ 2005(ಭಾ), ದಿನಾಂಕ: 6.12.2007
9) ಸರ್ಕಾರದ ಆದೇಶ ಸಂಖ್ಯೆ: ಪಿಡಿ 38 ಎಸ್‌ಪಿಬಿ 2008(ಭಾ), ದಿನಾಂಕ: 10.9.2008
10) ಸರ್ಕಾರದ ಅದೇಶ ಸಂಖ್ಯೆ: ಪಿಡಿ 48 ಎಸ್‌ಪಿಬಿ 2010, ದಿನಾಂಕ: 22.9.2010
11) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 121 ಶಿಸನೇ 2010, ದಿನಾಂಕ: 4.11.2010.

**ಪ್ರಸ್ತಾವನೆ:**

ರಾಜ್ಯದ ಯೋಜನೆಗಳಿಗೆ ಸಂಬಂಧಿಸಿದಂತೆ, ಸರ್ಕಾರಕ್ಕೆ ಸಲಹೆ ನೀಡುವ ಸಲುವಾಗಿ ರಾಜ್ಯ ಯೋಜನಾ ಮಂಡಳಿಯನ್ನು ರಚಿಸಿ ಉಲ್ಲೇಖ (1) ರಲ್ಲಿ ಓದಲಾದ, ದಿನಾಂಕ: 4.10.1993ರ ಸರ್ಕಾರದ ಆದೇಶದಲ್ಲಿ ಆದೇಶವನ್ನು ಹೊರಡಿಸಲಾಗಿರುತ್ತದೆ. ಉಲ್ಲೇಖ (2) ರಿಂದ (9) ರವರೆಗೆ ಓದಲಾದ ಸರ್ಕಾರದ ಆದೇಶಗಳಲ್ಲಿ ರಾಜ್ಯ ಯೋಜನಾ ಮಂಡಳಿಯನ್ನು ಕಾಲಕಾಲಕ್ಕೆ ಪುನರ್ರಚಿಸಲಾಗಿರುತ್ತದೆ. ಉಲ್ಲೇಖ (10) ರಲ್ಲಿ ಓದಲಾದ ದಿನಾಂಕ 22–9–2010ರ ಸರ್ಕಾರದ ಆದೇಶದಲ್ಲಿ ಶ್ರೀ ರಾಮಚಂದ್ರ ಗೌಡ, ಇವರನ್ನು ರಾಜ್ಯ ಯೋಜನಾ ಮಂಡಳಿಯ ಉಪಾಧ್ಯಕ್ಷರನ್ನಾಗಿ ನೇಮಿಸಲಾಗಿರುತ್ತದೆ ಮತ್ತು ಉಲ್ಲೇಖ (11) ರಲ್ಲಿ ಓದಲಾದ ದಿನಾಂಕ: 4.11.2010 ರ ಸರ್ಕಾರದ ಅಧಿಸೂಚನೆಯಲ್ಲಿ ಸಚಿವ ಸಂಪುಟ ದರ್ಜೆಯ ಸ್ಥಾನಮಾನವನ್ನು

ನೀಡಲಾಗಿರುತ್ತದೆ. ಸರ್ಕಾರವು ಈಗ ರಾಜ್ಯ ಯೋಜನಾ ಮಂಡಳಿಗೆ ಅಧಿಕಾರೇತರ ಸದಸ್ಯರನ್ನು ನಾಮ ನಿರ್ದೇಶನ ಮಾಡಲು ಉದ್ದೇಶಿಸಿರುತ್ತದೆ. ಅದರಂತೆ ರಾಜ್ಯ ಯೋಜನಾ ಮಂಡಳಿಯನ್ನು ಪುನರ್ರಚಿಸಲಾಗಿದೆ.

ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಪಿಡಿ 82 ಎಸ್‌ಪಿಬಿ 2011, ಬೆಂಗಳೂರು, ದಿನಾಂಕ: 9.3.2011**

ರಾಜ್ಯ ಯೋಜನಾ ಮಂಡಳಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಕೆಳಕಂಡಂತೆ ಪುನರ್ರಚಿಸಲಾಗಿದೆ.

| | | | |
|---|---|---|---|
| 1) | ಮಾನ್ಯ ಮುಖ್ಯಮಂತ್ರಿಗಳು | – | ಅಧ್ಯಕ್ಷರು |
| 2) | ಮಾನ್ಯ ಶ್ರೀ ರಾಮಚಂದ್ರ ಗೌಡ | – | ಉಪಾಧ್ಯಕ್ಷರು |
| 3) | ಮಾನ್ಯ ಸಚಿವರು, ಉನ್ನತ ಶಿಕ್ಷಣ, ಯೋಜನೆ ಸಾಂಖ್ಯಿಕ, ಮುಜರಾಯಿ ಹಾಗೂ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ | – | ಸದಸ್ಯರು |
| 4) | ಸರ್ಕಾರದ ಮುಖ್ಯ ಕಾರ್ಯದರ್ಶಿಗಳು | – | ಸದಸ್ಯರು |
| 5) | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರು | – | ಸದಸ್ಯರು |
| 6) | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ | – | ಸದಸ್ಯರು |
| 7) | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ | – | ಸದಸ್ಯರು |
| 8) | ಡಾ॥ ಎಂ. ಮಹಾದೇವಪ್ಪ<br>ನಿರ್ದೇಶಕರು ಜೆ.ಎಸ್.ಎಸ್. ಗ್ರಾಮೀಣಾಭಿವೃದ್ಧಿ ಪ್ರತಿಷ್ಠಾನ<br>(ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಕ್ಷೇತ್ರ) | – | ಸದಸ್ಯರು |
| 9) | ಶ್ರೀಮತಿ ಸುಧಾಮೂರ್ತಿ<br>ಇನ್‌ಫೋಸಿಸ್ ಪ್ರತಿಷ್ಠಾನ, ಬೆಂಗಳೂರು<br>(M.Y.R.A.D.A ಪ್ರತಿನಿಧಿ) | – | ಸದಸ್ಯರು |
| 10) | ಪ್ರೊ. ಹೆಚ್.ಪಿ. ಕಿಂಚಾ<br>ಮಾಜಿ ಕುಲಪತಿಗಳು<br>ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ (ಇಂಜಿನಿಯರಿಂಗ್ ಕ್ಷೇತ್ರ) | – | ಸದಸ್ಯರು |
| 11) | ಡಾ॥ ರಘುನಂದನ್, ಮಾಜಿ ಕಾರ್ಯದರ್ಶಿಗಳು<br>ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ<br>ಕರ್ನಾಟಕ ಸರ್ಕಾರ | – | ಸದಸ್ಯರು |
| 12) | ಪ್ರೊ. ಜಿ.ವಿ. ಜೋಶಿ<br>ಜಸ್ಟೀಸ್ ಕೆ.ಎಸ್. ಹೆಗ್ಡೆ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್<br>ನಿಟ್ಟೆ–574 110 | – | ಸದಸ್ಯರು |
| 13) | ಶ್ರೀ ಎಂ.ಸಿ. ಕೊಡ್ಲಿ<br>ಅರ್ಥಶಾಸ್ತ್ರ ಪ್ರೊಫೆಸರ್ (ನಿವೃತ್ತ)<br>ಕರ್ನಾಟಕ ವಿಶ್ವವಿದ್ಯಾಲಯ<br>ಧಾರವಾಡ | – | ಸದಸ್ಯರು |
| 14) | ಡಾ: ವೈ.ಎ.ದೇವಪಾಲ್<br># 13/23, ಬಜಾರ್ ರಸ್ತೆ<br>ಕೃಷ್ಣರಾಜನಗರ<br>ಮೈಸೂರು ಜಿಲ್ಲೆ | – | ಸದಸ್ಯರು |
| 15) | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು<br>ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು<br>ಸಾಂಖ್ಯಿಕ ಇಲಾಖೆ | – | ಪದನಿಮಿತ್ತ ಸದಸ್ಯ<br>ಕಾರ್ಯದರ್ಶಿ |

2) ಉಲ್ಲೇಖ (5) ರಲ್ಲಿ ಓದಲಾದ ದಿನಾಂಕ: 17.7.2001ರ ಸರ್ಕಾರದ ಆದೇಶದಲ್ಲಿ ಸೂಚಿಸಲಾಗಿರುವ ರಾಜ್ಯ ಯೋಜನಾ ಮಂಡಳಿಯ ಕಾರ್ಯಗಳು ಮುಂದುವರೆಯುತ್ತದೆ. ಅವುಗಳು ಕೆಳಕಂಡಂತಿದೆ:–

1) ಪಂಚವಾರ್ಷಿಕ ಯೋಜನೆ ಮತ್ತು ವಾರ್ಷಿಕ ಯೋಜನೆಗಳನ್ನು ರೂಪಿಸುವುದು ಹಾಗೂ ಕಾರ್ಯಗತಗೊಳಿಸುವ ಬಗ್ಗೆ ಸಲಹೆ ನೀಡುವುದು.
2) ಸ್ವಾಭಾವಿಕ ಮತ್ತು ಮಾನವ ಸಂಪನ್ಮೂಲಗಳ ಗರಿಷ್ಠ ಬಳಕೆಗಾಗಿ ನೀತಿಗಳನ್ನು ಸಲಹೆ ನೀಡುವುದು.
3) ರಾಜ್ಯದಲ್ಲಿ ಪ್ರಾಂತೀಯ ಅಸಮತೋಲನವನ್ನು ಕಡಿಮೆಗೊಳಿಸಲು ಸೂಕ್ತವಾದ ನೀತಿ ಹಾಗೂ ಕಾರ್ಯಕ್ರಮಗಳನ್ನು ರೂಪಿಸಲು ಸಲಹೆ ನೀಡುವುದು.
4) ಆರ್ಥಿಕ ಸುಧಾರಣೆ ಕಾರ್ಯಕ್ರಮಗಳಿಗನುಸಾರವಾಗಿ ರಾಜ್ಯದ ಆರ್ಥಿಕ ವ್ಯವಸ್ಥೆಯಲ್ಲಿ ಬಂಡವಾಳ ಹೂಡಿಕೆಯನ್ನು ಸುಧಾರಿಸಲು ಸಲಹೆಗಳನ್ನು ನೀಡುವುದು.
5) ಯೋಜನೆಯಡಿ ಬಂಡವಾಳ ಹೂಡಿಕೆ ಮಟ್ಟಗಳ ಬಗ್ಗೆ ಮತ್ತು ಅದಕ್ಕಾಗಿ ಸಂಪನ್ಮೂಲ ಸಂಗ್ರಹಣೆಗೆ ಅಗತ್ಯವಾದ ಸಲಹೆ ನೀಡುವುದು
6) ರಾಷ್ಟ್ರೀಯ ಯೋಜನೆಯ ಚೌಕಟ್ಟಿನೊಳಗೆ ರಾಜ್ಯ ಯೋಜನೆಗೆ ಸೂಕ್ತವಾದ ಆದ್ಯತೆ ಹಾಗೂ ತಂತ್ರಗಳನ್ನು ರೂಪಿಸಲು ಸಲಹೆ ನೀಡುವುದು.

7) ಯೋಜನಾ ಕಾರ್ಯಕ್ರಮಗಳು/ಯೋಜನೆಗಳ ಅನುಷ್ಠಾನ ಮತ್ತು ಇವುಗಳನ್ನು ಪರಿಣಾಮಕಾರಿಯಾಗಿ ಕಾರ್ಯಗತಗೊಳಿಸಲು ಅಗತ್ಯವಾದ ಸೂಕ್ತ ಸಲಹೆ ನೀಡುವುದು.

8) ವಿಕೇಂದ್ರೀಕೃತ ಯೋಜನೆಯನ್ನು ಅಭಿವೃದ್ಧಿಪಡಿಸಲು ಕ್ರಮಗಳನ್ನು ಸೂಚಿಸುವುದು ಹಾಗೂ ವಿಶೇಷವಾಗಿ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಕಾರ್ಯಗತಗೊಳಿಸುವಿಕೆ ಹಾಗೂ ಈ ಯೋಜನೆಗಳನ್ನು ರಾಜ್ಯ ವಲಯ ಯೋಜನೆಗಳಲ್ಲಿ ವಿಲೀನಗೊಳಿಸಲು ಅಗತ್ಯವಾದ ಕ್ರಮಗಳ ಸಲಹೆ ನೀಡುವುದು.

9) ಸರ್ಕಾರವು ಕಾಲಕಾಲಕ್ಕೆ ಅದಕ್ಕೆ ವಹಿಸುವ ವಿಷಯಗಳ ಬಗ್ಗೆ ಶಿಫಾರಸ್ಸು ಮಾಡುವುದು.

10) ರಾಜ್ಯ ಯೋಜನಾ ಮಂಡಳಿಯ ಕೆಲಸಗಳಿಗೆ ಅಗತ್ಯವಾದ ಸಂಶೋಧನಾ ಅಧ್ಯಯನ ಮತ್ತು ವಿಚಾರ ಸಂಕಿರಣಗಳನ್ನು ಸರ್ಕಾರದ ಹೊರಗಿನ ವಿಶ್ವವಿದ್ಯಾನಿಲಯಗಳು ಅಥವಾ ಇತರೆ ಸಂಶೋಧನಾ ಸಂಸ್ಥೆಗಳಿಂದ ಪ್ರಾಯೋಜಿಸುವುದು.

3) ರಾಜ್ಯ ಯೋಜನಾ ಮಂಡಳಿಯ ಅಧ್ಯಕ್ಷರಾದ ಮಾನ್ಯ ಮುಖ್ಯಮಂತ್ರಿಗಳ ಅಧಿಕಾರ ಹಾಗೂ ಮುಂದಾಳತ್ವದಲ್ಲಿ ರಾಜ್ಯ ಯೋಜನಾ ಮಂಡಳಿಯ ಉಪಾಧ್ಯಕ್ಷರು ಮಂಡಳಿಯ ಕೆಲಸ ಕಾರ್ಯಗಳು, ದಕ್ಷತೆ ಮತ್ತು ಸುಗಮವಾಗಿ ನೆರವೇರಲು ಅಗತ್ಯವಾದ ಅಧಿಕಾರವನ್ನು ಚಲಾಯಿಸುವುದು.

4) 1) ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ಅನುಬಂಧ-Aರ ಪಟ್ಟಿಯ ಪ್ರಕಾರ ಮಂಡಳಿಯ ಅಧಿಕಾರೇತರ ಸದಸ್ಯರಿಗೆ ಪ್ರಯಾಣ ಭತ್ಯೆಯನ್ನು ನೀಡಲು ಮಂಜೂರಾತಿಯನ್ನು ನೀಡಲಾಗಿದೆ.

2) ದಿನಭತ್ಯೆ ಅನ್ವಯಿಸುವ ಕಡೆಯಲ್ಲಿ ಅದರ ಬದಲು ಮಂಡಳಿಯ ಸಭೆಗಳಿಗೆ ಹಾಜರಾಗುವ ಅಧಿಕಾರೇತರ ಸದಸ್ಯರಿಗೆ ದಿನವೊಂದಕ್ಕೆ ರೂ. 500/- ಸಭಾ ಭತ್ಯೆಯನ್ನು ಮಂಜೂರು ಮಾಡಲಾಗಿದೆ.

5) ರಾಜ್ಯ ಯೋಜನಾ ಮಂಡಳಿಯ ಸದಸ್ಯ ಕಾರ್ಯದರ್ಶಿಗಳು ರಾಜ್ಯ ಯೋಜನಾ ಮಂಡಳಿಯ ಕಾರ್ಯಗಳ ಅಧಿಕಾರ ಹೊಂದಿರುತ್ತಾರೆ ಮತ್ತು ರಾಜ್ಯ ಯೋಜನಾ ಮಂಡಳಿಗೆ ಸಂಬಂಧಿಸಿದ ಲೆಕ್ಕಪತ್ರ ಶೀರ್ಷಿಕೆಯಡಿಯಿರುವ ನಿಧಿಯ ನಿರ್ವಹಣಾ ಅಧಿಕಾರ ಹೊಂದಿರುವರು.

6) ಇದಕ್ಕೆ ತಗಲುವ ವೆಚ್ಚವನ್ನು ಆಯವ್ಯಯ ಲೆಕ್ಕಶೀರ್ಷಿಕೆ **"3451-00-101-4-00"** ರಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 775

**ಉಷಾಬಾಯಿ**

ಸರ್ಕಾರದ ಅಧೀನ ಕಾರ್ಯದರ್ಶಿ-3

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ತುಮಕೂರು ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ (ಪರಿಷ್ಕೃತ-II) ಸರ್ಕಾರದ ಅಂತಿಮ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ:ನಅಇ/270/ಬೆಂರೂಪ್ರಾ/2009, ಬೆಂಗಳೂರು ದಿನಾಂಕ: 28.10.2009

2) ತುಮಕೂರು ನಗರಾಭಿವೃದ್ಧಿ ಪ್ರಾಧಿಕಾರದ ಪತ್ರ ಸಂಖ್ಯೆ: ತುನಪ್ರಾ / ನ.ಯೋಸ. / ಮ.ಯೋ / 01/ 1356 / 2007-08 ದಿನಾಂಕ: 21.10.2010

3) ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತ ಸಂಖ್ಯೆ: ನಗ್ರಾಯೋ (21)/ಉನಿ(ಯೋವಿ)ತುಮಕೂರು/ಮ.ಯೋ(ಪ.II) 2010-11 ದಿನಾಂಕ: 21.10.2010 ರಲ್ಲಿ ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ತುಮಕೂರು ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ (ಪರಿಷ್ಕೃತ- II)ಗೆ ತಾತ್ಕಾಲಿಕ ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ತುಮಕೂರು ನಗರಾಭಿವೃದ್ಧಿ ಪ್ರಾಧಿಕಾರವು ತುಮಕೂರು ನಗರದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾ ಯೋಜನೆ (ಪರಿಷ್ಕೃತ- II) ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(I)ರನ್ವಯ ಅಗತ್ಯ ಕ್ರಮ ಜರುಗಿಸಿ ಮಹಾ ಯೋಜನೆಯ ನಕ್ಷೆಗಳನ್ನು ಹಾಗೂ ವರದಿಯನ್ನು ತಯಾರಿಸಿ ಸರ್ಕಾರದ ಅಂತಿಮ ಅನುಮೋದನೆಗೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (3)ರ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತದಲ್ಲಿ ತುಮಕೂರು ನಗರದ ಜನಸಂಖ್ಯೆಯು 2031 ರಲ್ಲಿ 9,50,000 ಗಳಷ್ಟು ಬೆಳವಣಿಗೆಯಾಗುವುದಾಗಿ ಅಂದಾಜಿಸಿ ಮಹಾ ಯೋಜನೆಯನ್ನು ತಯಾರಿಸಲಾಗಿದೆ. ತುಮಕೂರು ನಗರದ ಸ್ಥಳೀಯ ಯೋಜನಾ ಪ್ರದೇಶದ 310.00 ಹೆಕ್ಟೇರ್ ಪ್ರದೇಶದಲ್ಲಿ 12944.89 ಹೆಕ್ಟೇರ್ ಪ್ರದೇಶವನ್ನು ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 12 ರಲ್ಲಿನ ಅಂಶಗಳನ್ನು ಪರಿಗಣಿಸಿ, ನಗರದ ಮುಂದಿನ ಯೋಜಿತ ಬೆಳವಣಿಗೆಗಳಿಗಾಗಿ ಪ್ರಸ್ತಾಪಿಸಿರುವ 11774.74 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 6451.52 ಹೆಕ್ಟೇರ್ (ಶೇ. 54.92), ವಾಣಿಜ್ಯಕ್ಕಾಗಿ 479.99 ಹೆಕ್ಟೇರ್ (ಶೇ. 4.08), ಕೈಗಾರಿಕೆಗಾಗಿ 1002.41 ಹೆಕ್ಟೇರ್ (ಶೇ. 8.51), ಸಾರ್ವಜನಿಕ/ಅರೆ ಸಾರ್ವಜನಿಕ ಉಪಯೋಗಕ್ಕೆ 872.80 ಹೆಕ್ಟೇರ್ (ಶೇ. 7.41), ಉದ್ಯಾನವನ/ಬಯಲು ಜಾಗೆಗಳಿಗೆ 997.87 ಹೆಕ್ಟೇರ್ (ಶೇ.8.47), ಸಾರ್ವಜನಿಕ ಉಪಯುಕ್ತತೆಗಾಗಿ 44.41 ಹೆಕ್ಟೇರ್ (ಶೇ.0.38) ಹಾಗೂ ಸಾರಿಗೆ / ಸಂಪರ್ಕ ವಲಯಕ್ಕೆ 1925.41 ಹೆಕ್ಟೇರ್ (ಶೇ. 16.36) ಪ್ರದೇಶವನ್ನು ನಿಗದಿಪಡಿಸಲಾಗಿದೆ. ಮಹಾ ಯೋಜನೆ (ಪರಿಷ್ಕೃತ- II) ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು ಮಹಾಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(3)ರನ್ವಯ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 377 ಬೆಂರೂಪ್ರಾ 2010, ಬೆಂಗಳೂರು, ದಿನಾಂಕ 10.03.2011**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ತುಮಕೂರು ನಗರದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆ (ಪರಿಷ್ಕೃತ– II) ನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(3)ರನ್ವಯ ಈ ಕೆಳಗಿನ ನಿಬಂಧನೆಗಳಿಗೊಳಪಟ್ಟು ಅಂತಿಮ ಅನುಮೋದನೆಯನ್ನು ನೀಡಲಾಗಿದೆ.

1. ತುಮಕೂರು ತಾಲ್ಲೂಕು ಊರ್ಡಿಗೆರೆ ಹೋಬಳಿ ಮೈದಾಳ ಅಮಾನಿಕೆರೆ ಗ್ರಾಮದ ಸ.ನಂ. 271ರ ಭಾಗಶ: ಹಾಗೂ ಸ.ನಂ. 273ರ ಜಮೀನುಗಳ ಭೂ ಉಪಯೋಗವನ್ನು ವಸತಿ ವಲಯವೆಂದು ಪರಿಗಣಿಸತಕ್ಕದ್ದು.
2. ತುಮಕೂರು ಅಮಾನಿಕೆರೆ ಗ್ರಾಮದ ಸ.ನಂ. 23/1ರ ಜಮೀನಿನ ಭೂ ಉಪಯೋಗವನ್ನು ವಸತಿ ವಲಯವೆಂದು ಪರಿಗಣಿಸತಕ್ಕದ್ದು.

ಮಹಾ ಯೋಜನೆ (ಪರಿಷ್ಕೃತ– II)ಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 776

**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ರಸ್ತೆ ಮೇಲು ಸೇತುವೆ/ರಸ್ತೆ ಕೆಳಸೇತುವೆ ನಿರ್ಮಾಣಕ್ಕೆ ಸಂಬಂಧಿಸಿದಂತೆ GAD ತಯಾರಿಸುವ ರೈಟ್ಸ್ ಸಂಸ್ಥೆಗೆ ಹಣ ಪಾವತಿಸಲು ಹಣ ಬಿಡುಗಡೆ ಮಾಡುವ ಬಗ್ಗೆ

**ಓದಲಾಗಿದೆ :** 1) ದಿನಾಂಕ 29–05–2007ರ ಸರ್ಕಾರಿ ಆದೇಶ ಸಂ. IDD 47 NSW 2007.
2) ಸೀನಿಯರ್ ಡೆಪ್ಯುಟಿ ಜನರಲ್ ಮ್ಯಾನೇಜರ್, ರೈಟ್ಸ್, ಬೆಂಗಳೂರು, ಇವರ ಪತ್ರ ಸಂಖ್ಯೆ: RITES/BLR/IDD-ROB-RUB/Billing/2011 ದಿನಾಂಕ 18–02–2011.

**ಪ್ರಸ್ತಾವನೆ:**

ರೈಟ್ಸ್ (ರೈಲು ಇಂಡಿಯಾ ಟೆಕ್ನಿಕಲ್ ಅಂಡ್ ಎಕನಾಮಿಕ್ ಸರ್ವೀಸಸ್) ರಸ್ತೆ ಮೇಲು ಸೇತುವೆ/ರಸ್ತೆ ಕೆಳ ಸೇತುವೆ ನಿರ್ಮಾಣಕ್ಕೆ ಸಂಬಂಧಿಸಿದಂತೆ GAD ತಯಾರಿಸಲು ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದು ಮೇಲೆ ಉಲ್ಲೇಖ (1)ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದನ್ವಯ ರಸ್ತೆ ಮೇಲು ಸೇತುವೆ/ರಸ್ತೆ ಕೆಳಸೇತುವೆಗಳ ನಿರ್ಮಾಣಕ್ಕಾಗಿ ಯೋಜನಾ ವರದಿ ಹಾಗೂ GAD (General Arrangement Drawing) ಗಳನ್ನು ತಯಾರಿಸಲು ಮೆ॥ ರೈಟ್ಸ್ ಸಂಸ್ಥೆಯವರಿಗೆ ವಹಿಸಲಾಗಿದ್ದು ಇದಕ್ಕೆ ತಗುಲಿದ ಶುಲ್ಕ ರೂ. 96,74,906.00 ಲಕ್ಷಗಳನ್ನು (ತೊಂಬತ್ತಾರು ಲಕ್ಷದ ಎಪ್ಪತ್ತು ನಾಲ್ಕು ಸಾವಿರದ ಒಂಬೈನೂರ ಆರು ರೂಪಾಯಿಗಳು ಮಾತ್ರ) ಪಾವತಿಸುವಂತೆ ರೈಟ್ಸ್ ಸಂಸ್ಥೆಯು ಬೇಡಿಕೆ ಸಲ್ಲಿಸಿದ್ದು ಈ ಮೊತ್ತವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

2. ಈ ಮೇಲಿನ ವಿವರಗಳನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 77 ರಾರಾಹೆ 2009, ಬೆಂಗಳೂರು ದಿನಾಂಕ 08.03.2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಅನುಮೋದಿತ ರಸ್ತೆ ಮೇಲು ಸೇತುವೆ/ರಸ್ತೆ ಕೆಳಸೇತುವೆ ನಿರ್ಮಾಣಕ್ಕೆ ಸಂಬಂಧಿಸಿದಂತೆ ಯೋಜನಾ ವರದಿ ಹಾಗೂ GAD (General Arrangement Drawing) ಗಳನ್ನು ತಯಾರಿಸಲು ರೂ. 96,74,906.00 ಲಕ್ಷಗಳನ್ನು (ತೊಂಬತ್ತಾರು ಲಕ್ಷದ ಎಪ್ಪತ್ತು ನಾಲ್ಕು ಸಾವಿರದ ಒಂಬೈನೂರ ಆರು ರೂಪಾಯಿಗಳು ಮಾತ್ರ) ಈ ಸಾಲಿನ ಲೆಕ್ಕ ಶೀರ್ಷಿಕೆ "5465–01–190–3–04 (ಯೋಜನೆ)–211ರ ಕೆ–ರೈಡ್ ರಸ್ತೆ ಮೇಲು/ಕೆಳ ಸೇತುವೆ ಇದರ ಅಡಿಯಲ್ಲಿ ಒದಗಣೆ ಮಾಡಿರುವ ರೂ. 30.00 ಕೋಟಿಗಳ ಅನುದಾನದಿಂದ ರೈಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ.

2. ಈ ಮೊತ್ತವನ್ನು ಸೀನಿಯರ್ ಡೆಪ್ಯುಟಿ ಜನರಲ್ ಮ್ಯಾನೇಜರ್, ರೈಟ್ಸ್, ಬೆಂಗಳೂರು, ಇವರು ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಸರ್ಕಾರದ ಅಧೀನ ಕಾರ್ಯದರ್ಶಿಯವರ ಮೇಲು ರುಜುವಿನೊಂದಿಗೆ ಪೇಯಿಸ್ ರಸೀತಿಯ ಮೂಲಕ ಡ್ರಾ ಮಾಡಿ ರಸ್ತೆ ಮೇಲು ಸೇತುವೆ/ರಸ್ತೆ ಕೆಳಸೇತುವೆ ನಿರ್ಮಾಣಕ್ಕೆ ಸಂಬಂಧಿಸಿದಂತೆ GAD ತಯಾರಿಕೆಯ ಶುಲ್ಕಕ್ಕಾಗಿ ಬಿಡುಗಡೆ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎ. ಬಾಬುರವೀಂದ್ರನಾಥ್ ಪಟೇಲ್**

ಪಿ.ಆರ್. 777

ಸರ್ಕಾರದ ಅಧೀನ ಕಾರ್ಯದರ್ಶಿ
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ॥ ಶ್ರೀ ಚಾಮುಂಡೇಶ್ವರಿ ಶುಗರ್ಸ್ ಲಿಮಿಟೆಡ್ ಇವರಿಗೆ 18 ಮೆಗಾ ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡುವ ಬಗ್ಗೆ.

**ಓದಲಾಗಿದೆ :** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/04/ಸಿಎಸ್ಎಲ್–ಹಾಸನ/10/3521 ದಿನಾಂಕ: 10.11.2010/20.12.2010.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಶ್ರೀ ಚಾಮುಂಡೇಶ್ವರಿ ಶುಗರ್ಸ್ ಲಿಮಿಟೆಡ್ ಇವರಿಗೆ ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನ ಶ್ರೀನಿವಾಸಪುರ ಎಂಬಲ್ಲಿ 18 MW (Gross) ಮತ್ತು

12.5 MW (exportable) ಸಾಮರ್ಥ್ಯದ ಸಹ ವಿದ್ಯುತ್ ಘಟಕವನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡುವಂತೆ ಸರ್ಕಾರಕ್ಕೆ ಶಿಫಾರಸು ಮಾಡಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 499 ಎನ್‌ಸಿಇ 2010, ಬೆಂಗಳೂರು, ದಿನಾಂಕ 25.02.2011**

ಮೆ॥ ಶ್ರೀ ಚಾಮುಂಡೇಶ್ವರಿ ಶುಗರ್ಸ್ ಲಿಮಿಟೆಡ್ ಇವರಿಗೆ ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನ ಶ್ರೀನಿವಾಸಪುರ ಎಂಬಲ್ಲಿ 18 MW (Gross) ಮತ್ತು 12.5 MW (exportable) ಸಾಮರ್ಥ್ಯದ ಸಹ ವಿದ್ಯುತ್ ಘಟಕವನ್ನು ಸ್ಥಾಪಿಸಲು ಈ ಕೆಳಗಿನ ನಿಬಂಧನೆಗೊಳಪಟ್ಟು ಸರ್ಕಾರದ ನಿರಾಕ್ಷೇಪಣೆಯನ್ನು ನೀಡಲಾಗಿದೆ.

1. The company shall obtain separate clearance from Karnataka Power Transmission Corporation Limited in respect of evacuation of power.
2. The company shall enter into wheeling and banking agreement with Karnataka Power Transmission Corporation Limited in case of selling power to third party and power purchase agreement in case of selling power to Karnataka Power Transmission Corporation Limited.
3. The company shall obtain necessary statutory clearance wherever required from the respective Departments/Organizations such as Forest Department, Revenue Department, & Karnataka State Pollution Control Board, etc. for both the Sugar Mill and the Power plant.
4. The Detailed Project Report (D.P.R.) for the power plant shall be got approved by Karnataka Renewable Energy Development Limited, before the commencement of the power plant.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 778

**ಇಂಧನ ಸಚಿವಾಲಯ**

**ವಿಷಯ :** ಮೆ॥ ಅರುಲ್ ಮಾರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಇವರ ರದ್ದು ಮಾಡಲಾಗಿರುವ 11.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಪೂರ್ವಸ್ಥಿತಿಗೆ ತಂದು ಅನುಷ್ಠಾನಕ್ಕಾಗಿ ಕಾಲಾವಕಾಶ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 448 ಎನ್‌ಸಿಇ 2008 ದಿನಾಂಕ: 20.06.2009.
2. ಮೆ॥ ಅರುಲ್ ಮಾರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಇವರ ಪತ್ರ ದಿನಾಂಕ: 15.07.2009.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ದಿನಾಂಕ: 05/07.09.2009, 03/05.12.2009.
4. ದಿನಾಂಕ: 19.04.2010ರಂದು ನಡೆದ ರಿವ್ಯೂ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ॥ ಅರುಲ್ ಮಾರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಇವರಿಗೆ ಚಿತ್ರದುರ್ಗ ಜಿಲ್ಲೆಯ ತುರುವನೂರು ಮತ್ತು ಮದನಾಯಕನಹಳ್ಳಿ ಗ್ರಾಮಗಳಲ್ಲಿ ಹಂಚಿಕೆ ಮಾಡಲಾಗಿರುವ 11.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಮತ್ತು ಒಡಂಬಡಿಕೆಯನ್ನು ರದ್ದುಗೊಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ, ಮೆ॥ ಅರುಲ್ ಮಾರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಇವರು ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಮೂಲಭೂತ ಕೆಲಸ ಕಾರ್ಯಗಳನ್ನು ಮಾಡಿದ್ದು, ಯೋಜನೆಯ ರದ್ಧತಿ ಆದೇಶವನ್ನು ಹಿಂದಕ್ಕೆ ಪಡೆಯುವಂತೆ ಕೋರಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಮೆ॥ ಅರುಲ್ ಮಾರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಇವರ ರದ್ದಾಗಿರುವ 11.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಪುನ:ಶ್ಚೇತನಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಸಭೆಯ ನಿರ್ಣಯವು ಈ ಕೆಳಗಿನಂತಿದೆ.

"It has a 11.2 MW capacity wind project allotted at Turuvanuru & Madanayakanahalli in Chitradurga District and has remained uncommissioned even after aged 10 years, and hence, on the basis of age of the project it was cancelled. However, M/s. AMTL pursued the development of the project simultaneously and obtained the following project related works in possessions. The Government land 23 Acre-12 Guntas has already been obtained including power evacuation approval, paid grid augmentation charges of Rs. 33 lakhs, route approval for power evacuation. Further, the physical activities such as construction of approach road, substation, casting of WTG foundation receipt of tower materials and substation materials etc., are continued at site. The representative of the firm apprised the committee that the firm has scheduled to commission 10 MW by September 2010 including 1 MW by May 2010 and balance and balance 7.25 MW & 6.75 of M/s. Marudhavel Industries Ltd by March 2011. The representation also stated

that they being the WTG manufacturer have acquired necessary & requisite clearances including submission of DPR, arrangement of project finance for the project. The firm to realize the project and they requested for restoration of capacity allotted.

Referring to above appraisal, the members in the meeting expressed that, this firm has not taken up required measures for developing the project in time. However, having seen the physical activities done at site and as presented by the representative, it was decided in the meeting to restore the cancellation order and permitted to commission the project by March 2011. Further, as a measure for firmness in completion of project a binding condition was imposed i.e., the firm has to pay a penalty of Rs. 1.00/- lakhs per MW to KREDL. If the project remained un-commissioned by end of March 2011, the amount so deposited, will be transferred to Akshaya Shakthi Nidhi in KREDL and the project will be cancelled."

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 448 ಎನ್‌ಸಿಇ 2008, ಬೆಂಗಳೂರು, ದಿನಾಂಕ 04.03.2011**

ಮೆ॥ ಅರುಲ್ ಮಾರಿಯಮ್ಮನ್ ಟೆಕ್ಸ್‌ಟೈಲ್ಸ್ ಲಿಮಿಟೆಡ್ ಇವರಿಗೆ ಚಿತ್ರದುರ್ಗ ಜಿಲ್ಲೆಯ ತುರುವನೂರು ಮತ್ತು ಮದನಾಯಕನಹಳ್ಳಿ ಗ್ರಾಮಗಳಲ್ಲಿ ಹಂಚಿಕೆ ಮಾಡಲಾಗಿದ್ದ 11.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ರದ್ಧತಿ ಆದೇಶವನ್ನು ಹಿಂಪಡೆಯಲಾಗಿದೆ. ಯೋಜನೆಯ ಅನುಷ್ಠಾನಕ್ಕಾಗಿ ಕೊನೆಯ ಅವಕಾಶವಾಗಿ ದಿನಾಂಕ: 31.12.2011 ರ ತನಕ ಕಾಲಾವಕಾಶವನ್ನು ಈ ಕೆಳಗಿನ ನಿಬಂಧನೆಗೊಳಪಟ್ಟು ನೀಡಲಾಗಿದೆ.

1) ಮೆಗಾ ವ್ಯಾಟ್ ಒಂದಕ್ಕೆ ರೂ. 1.00 ಲಕ್ಷದಂತೆ ಕೆ.ಆರ್.ಇ.ಡಿ.ಎಲ್.ಗೆ ದಂಡ ಪಾವತಿಸತಕ್ಕದ್ದು.
2) ದಿನಾಂಕ: 31.12.2011ರ ಒಳಗೆ ಯೋಜನೆಯನ್ನು ಪ್ರಾರಂಭಿಸದಿದ್ದಲ್ಲಿ, ಎಲ್ಲಾ ಮೊತ್ತವನ್ನು ಕೆ.ಆರ.ಇ.ಡಿ.ಎಲ್.ನ "ಅಕ್ಷಯ ಶಕ್ತಿ ನಿಧಿ"ಗೆ ವರ್ಗಾವಣೆ ಮಾಡಲಾಗುವುದು ಹಾಗೂ ಯೋಜನೆಯ ತನ್ನಿಂತಾನೆ ರದ್ದಾಗಿದೆ ಎಂದು ತಿಳಿಯುವುದು.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1) ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. 779

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

## COMMERCE AND INDUSTRIES SECRETARIAT

**Sub:** Approval to the Project Proposal of M/s. Hindustan Coca Cola Beverages Pvt. Ltd., to establish an unit for **"Aerated Soft Drinks, Fruit Juices & Packed Drinking Water"** in Yadgir District-request for additional land-reg.

**Read :** 1. Government Order No. CI 301 SPI 2010, dated : 14-07-2010.

2**.** Proceedings of the 24th State High Level Clearance Committee (SHLCC) Meeting held on 24-01-2011.

**PREAMBLE :**

M/s. Hindustan Coca Cola Beverages Pvt. Ltd., has been accorded approval to establish an unit for **"Aerated Soft Drinks, Fruit Juices & Packed Drinking Water"** in Yadgir District, with an investment of Rs. 250 crores, generating employment to about 253 persons. Now, they have sought an additional 100 acres of land and a revised project to Rs. 275 crores.

In the 24th State High Level Clearance Committee (SHLCC) Meeting held on 24-01-2011, the proposal of the Company was discussed and approved.

Government has examined the recommendations made by the State High Level Clearance Committee in its 24th Meeting held on 24-01-2011, in all aspects.

Hence the following Order.

**GOVERNMENT ORDER NO. CI 301 SPI 2010, BANGALORE, DATED : 11-03-2011.**

Government is pleased to accord approval to the proposal of M/s. Hindustan Coca Cola Beverages Pvt. Ltd., for allotment of additional 100 acres of land in Yadgir Industrial Area (Kadechur & Badiyal Villages) with a revised project cost of Rs. 275.00 crores.

Other terms and conditions mentioned in the G.O. read at (1) above, remain same.

By Order and in the name of the Governor of Karnataka

**A.V. Srinivasa Dikshit**

P.R. 785

Desk Officer (Technical Cell)

Commerce and Industries Department.

## COMMERCE AND INDUSTRIES SECRETARIAT

## CORRIGENDUM

**No. CI/283/SPI/2009 Bangalore, Dated : 11-03-2011**

**Sub:** Approval to the Project Proposal of M/s. Surana Power Ltd., to establish "435 MW Thermal Power Plant" in Wadlur and Yaganur Villages, Raichur District-change of applicable policy.

**Read :** 1. Government Order No. CI 283 SPI 2009, dated : 16-11-2009.

2. Proceedings of the 24th State High Level Clearance Committee (SHLCC) Meeting held on 24-01-2011.

In the Government Order No. CI 283 SPI 2009, dated : 16-11-2009, in the incentives and concessions portion please read as "applicable Government Order/Policy" in place of "Energy Policy"

Infrastructure facilities, incentives, concessions and other terms and conditions remain the same as in the G.O. read at (1) above.

By Order and in the name of the Governor of Karnataka

**A.V. Srinivasa Dikshit**

Desk Officer (Technical Cell)

Commerce and Industries Department.

P.R. 786

## COMMERCE AND INDUSTRIES SECRETARIAT

## CORRIGENDUM

**No. CI/30/SPI/2010 Bangalore, Dated : 11-03-2011**

**Sub:** Approval to acquire additional land of 524 acres in Hanganhalli Village, Sedam Taluk, Gulbarga District to enhance plant capacity of M/s Rajashree Cement Works.

**Read :** 1. Government Order No. CI 30 SPI 2010, dated : 25-02-2010.

2. Government Order No. CI 30 SPI 2010, dated : 18-08-2010.

3. Proceedings of the 24th State High Level Clearance Committee (SHLCC) Meeting held on 24-01-2011.

In the Government Order No. CI 30 SPI 2010, dated : 18-08-2010, in the order portion please read as **"purchase of additional 524-10 acres of land in Hanganhalli Village, Sedam Taluk, Gulbarga District, U/s 109 of KLR Act out of which 88-39 acres Government land to be allotted by Revenue Department and balance 435-11 acres to be purchased U/s 109 KLR Act by the company"** in place of **"purchase additional 524 acres of land in Hanganhalli Village, Sedam Taluk, Gulbarga District, U/s 109 of KLR Act".**

By Order and in the name of the Governor of Karnataka

**A.V. Srinivasa Dikshit**

Desk Officer (Technical Cell)

Commerce and Industries Department.

P.R. 787

## COMMERCE AND INDUSTRIES SECRETARIAT

## CORRIGENDUM

**No. CI/281/SPI/2010 Bangalore, Dated : 15-03-2011**

**Sub:** Approval to the Project Proposal of M/s, Marib Infrastructure India Pvt. Ltd., to establish an "Innovative, State of the art, multi user recreational tourism related infrastructural development project (Space City)" at various Sy. No's of Hosahudiya, Adiganapalli and Narepalli village, Bagepalli Taluk, Chikkaballapur District-amendment to land acquisition on consent-reg.

**Read :** 1. Government Order No. CI 281 SPI 2010, dated : 14-07-2010.

2. Proceedings of the 24th State High Level Clearance Committee (SHLCC) Meeting held on 24-01-2011.

In the Order portion of the Government Order No. CI 281 SPI 2010, dated : 14-07-2010, under the infrastructure facility 1. "Land" the words **"to be purchased U/s 109 of KLR Act and conversion of the same"** be replaced by **"to be acquired by KIADB as SUC".**

Other terms and conditions remain the same as in the G.O. read at (1) above.

By Order and in the name of the Governor of Karnataka
**A.V. Srinivasa Dikshit**
Desk Officer (Technical Cell)
Commerce and Industries Department.

P.R. 788

## COMMERCE AND INDUSTRIES SECRETARIAT

**Sub:** The project proposal of M/s. JSW Steel Ltd., for enhancement of installed capacity of "Integrated Steel Plant from 10 Million TPA to 16 Million TPA & to set up 600 MW captive power plant" at Sandur Taluk, Bellary District - approval for additional land-reg.

**Read :** 1. Government Order No. CI 262 SPI 2009, dated : 29-10-2009.
2**.** Proceedings of the 24th State High Level Clearance Committee (SHLCC) Meeting held on 24-01-2011.

**PREAMBLE :**

M/s. JSW Steel Ltd., has been accorded approval for enhancement of installed capacity of "Integrated Steel Plant from 10 Million TPA to 16 Million TPA & to set up 600 MW captive power plant" at 1150 acres of land within the existing factory premises of 8042 acres, in Torangallu Village, Sandur Taluk, Bellary District, with an additional investment of Rs. 15131.70 crores, generating employment to about 6000 persons. Now they have sought an additional land of 839 acres the Gadaginur and Gonhal Villages for creation of impounding reservoir.

In the 24th State High Level Clearance Committee (SHLCC) Meeting held on 24-01-2011, the proposal of the Company has been discussed in detailed and approved.

Government has examined the recommendations made by the State High Level Clearance Committee in its 24th Meeting held on 24-01-2011, in all aspects.

Hence the following order.

**GOVERNMENT ORDER NO. CI 262 SPI 2009, BANGALORE, DATED : 11-03-2011.**

In the circumstances explained above, Government is pleased to accord approval to the proposal of M/s. JSW Steel Ltd., for creation of an impounding reservoir and acquisition and allotment of additional land of 700 acres at Gadaginur and Gonhal Villages by KIADB as SUC for the above purpose.

Other terms and conditions remain the same as in the G.O. read at (1) above.

By Order and in the name of the Governor of Karnataka
**A.V. Srinivasa Dikshit**
Desk Officer (Technical Cell)
Commerce and Industries Department.

P.R. 789

## COMMERCE AND INDUSTRIES SECRETARIAT

**Sub:** Approval to the project proposal of M/s. JSW Infrastructure Ltd., to establish "Railway Siding and Railway Line" at Bellary District.

**Read :** 1. Government Order No. CI 221 SPI 2010, dated : 02-06-2010.
2**.** Proceedings of the 24th State High Level Clearance Committee (SHLCC) Meeting held on 24-01-2011.

**PREAMBLE :**

M/s. JSW Infrastructure Ltd., has been accorded approval to establish "9 kms length Railway Siding from Daroji Railway Junction to the plant site of M/s JSW Steels Ltd., at Sulthanpur and 8 kms length branch railway line to Sushilnagar Village, from 16.8 km point of the main railway line off Torangallu-Rangithpura", with an investment of Rs. 87 crores, generating employment to about 366 persons.

Now they have requested to transfer the project to M/s . JSW Steel Ltd., from M/s JSW Infrastructure Ltd,. to take up the Railway Siding Project.

In the 24th State High Level Clearance Committee (SHLCC) Meeting held on 24-01-2011, the proposal of the Company has been approved.

Government has examined the recommendations made by the State High Level Clearance Committee in the 24th Meeting held on 24-01-2011, in all aspects.

Hence the following Order.

**GOVERNMENT ORDER NO. CI 221 SPI 2010, BANGALORE, DATED : 11-03-2011.**

Government is pleased to transfer the approval given to M/s JSW Infrastructure Ltd., in favour of M/s JSW Steel Ltd., to establish a 'Railway Siding and Railway Line" and also to include 'Bhujanganagar" to the list of villages mentioned under infrastructure facilities"- "Land"

Other terms and conditions remain the same as in the G.O. read at (1) above.

By Order and in the name of the Governor of Karnataka
**A.V. Srinivasa Dikshit**
Desk Officer (Technical Cell)
Commerce and Industries Department.

P.R. 790